RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೮<br>**Volume 148** | ಬೆಂಗಳೂರು, ಗುರುವಾರ, ಫೆಬ್ರವರಿ ೧೪, ೨೦೧೩ (ಮಾಘ ೨೫ , ಶಕ ವರ್ಷ ೧೯೩೪)<br>**Bangalore, Thursday, February 14, 2013 (Magha 25, Shaka Varsha 1934)** | ಸಂಚಿಕೆ ೭<br>**Issue 7** |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಆಲೂರು ಕಂದಾಯ ತಾಲ್ಲೂಕು, ಹಾಸನ ಜಿಲ್ಲೆಗೆ–2 ಹೆಚ್ಚುವರಿ ಹುದ್ದೆಗಳನ್ನು ತುಂಬುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಲಾ 180 ಎಲ್‌ಸಿಎಲ್ 2011, ದಿನಾಂಕ 11–11–2011.
2. ಸರ್ಕಾರದ ಪತ್ರ ಸಂಖ್ಯೆ: ಲಾ 180 ಎಲ್‌ಸಿಎಲ್ 2011, ದಿನಾಂಕ 03–01–2012.
3. ಅ. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ಅಧಿಸೂಚನೆ ಸಂಖ್ಯೆ : 2/2012, ದಿನಾಂಕ 10–01–2012.
   ಆ. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ಪತ್ರ ಸಂಖ್ಯೆ : ಎಡಿಎಂ/889/2012, ದಿನಾಂಕ 22–02–2012.
4. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ ಜಿಎಸ್‌ಆರ್/114(ಇ), ದಿನಾಂಕ 24–02–2009.
5. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ : ಲಾ 61 ಎಲ್‌ಸಿಎಲ್ 2011, ದಿನಾಂಕ 14–07–2010.
6. ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ/180/ಎಲ್‌ಸಿಎಲ್/2011, ದಿನಾಂಕ 21–06–2012.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿ ಹಾಸನ ಜಿಲ್ಲೆಯ ಆಲೂರು ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಹೆಚ್ಚುವರಿಯಾಗಿ 2 ನೋಟರಿ ಹುದ್ದೆಗಳನ್ನು ಸೃಜಿಸಿದ್ದು, ಅದರಂತೆ ನೋಟರಿ ಹುದ್ದೆಯನ್ನು ಭರ್ತಿ ಮಾಡಲು ನೋಟರಿಗಳ ಅಧಿನಿಯಮ/ನಿಯಮಗಳನ್ವಯ ಅಧಿಸೂಚನೆ ಹೊರಡಿಸುವ ಮೂಲಕ ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1997ರ ನಿಯಮ 12 ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಜಿಲ್ಲೆ ಇವರನ್ನು ಮೇಲೆ (2) ರಲ್ಲಿ ಓದಲಾದ ದಿನಾಂಕ 03–01–2012 ರ ಪತ್ರದಲ್ಲಿ ಕೋರಲಾಗಿತ್ತು.

ಅದರಂತೆ ಮೇಲೆ (3) ರಲ್ಲಿ ಓದಲಾದ ಪತ್ರಗಳೊಂದಿಗೆ 10 ಜನರ ಮೆಮೊರಿಯಲ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಇವರು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ (4) ರಲ್ಲಿ ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು 2009 ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ (5) ರಲ್ಲಿ ಓದಲಾದ ದಿನಾಂಕ 14–07–2010 ರ ಅಧಿಸೂಚನೆಯಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ (6) ರಲ್ಲಿ ಓದಲಾದ ದಿನಾಂಕ 21–06–2012ರ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 180 ಎಲ್‌ಸಿಎಲ್, 2011, ಬೆಂಗಳೂರು, ದಿನಾಂಕ 28–08–2012**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಶ್ರೀ ಆರ್.ಟಿ. ಧನಂಜಯ, ವಕೀಲರು ಸನ್ ಆಫ್ ಲೇಟ್ ತಿಮ್ಮೇಗೌಡ, ರಾಯಸಮುದ್ರ ವಿಲೇಜ್, ಕೀರಗಡ್ಲು ಅಂಚೆ, ಕಸಬ ಹೋಬಳಿ, ಆಲೂರು ತಾಲ್ಲೂಕು, ಹಾಸನ ಜಿಲ್ಲೆ–573213 ಮತ್ತು ಶ್ರೀ ಎಂ.ಎಂ. ಸುನೀಲ್, ವಕೀಲರು ಸನ್ ಆಫ್ ಎಂ.ಪಿ. ಮಂಜುನಾಥ್, ಮಂಜಾಳಗೋಡ್ ಎಸ್ಟೇಟ್, ಮದ್ದಬಾಲು ಅಂಚೆ, ಪಾಳ್ಯ ಹೋಬಳಿ, ಆಲೂರು ತಾಲ್ಲೂಕು, ಹಾಸನ ಜಿಲ್ಲೆ ರವರುಗಳನ್ನು ವೃತ್ತಿ ಪ್ರಮಾಣಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಆಲೂರು ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ 501–0–ಇತರೆ ಸ್ವೀಕೃತಿಗಳು–06 ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ.1000/– (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಗಳನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುಕ್ಮಿಣಿ ದಿವಾಕರ್,**
ಸರ್ಕಾರದ ಅಧೀನ ಕಾರ್ಯದರ್ಶಿಗಳು (ಆಡಳಿತ–2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**PR. 42**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ರಾಮನಗರ ಕಂದಾಯ ತಾಲ್ಲೂಕು, ರಾಮನಗರ ಜಿಲ್ಲೆಗೆ 5 ಹೆಚ್ಚುವರಿ ಹುದ್ದೆಗಳನ್ನು ತುಂಬುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಲಾ 226 ಎಲ್‌ಸಿಎಲ್ 2010, ದಿನಾಂಕ 10–01–2012.
2. ಸರ್ಕಾರದ ಪತ್ರ ಸಂಖ್ಯೆ: ಲಾ 226 ಎಲ್‌ಸಿಎಲ್ 2010, ದಿನಾಂಕ 03–02–2012.
3. ಅ. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ಅಧಿಸೂಚನೆ ಸಂಖ್ಯೆ : ಆಡಳಿತ /10/2010, ದಿನಾಂಕ 14–02–2012.
   ಆ. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ಪತ್ರ ಸಂಖ್ಯೆ : ಎಡಿಎಂ/10/2010, ದಿನಾಂಕ 07–04–2012.
4. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ ಜಿಎಸ್‌ಆರ್/114(ಇ), ದಿನಾಂಕ 24–02–2009.
5. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ : ಲಾ 61 ಎಲ್‌ಸಿಎಲ್ 2011, ದಿನಾಂಕ 14–07–2010.
6. ಸಂದರ್ಶನ ಸೂಚನಾ ಪತ್ರ ಸಂಖ್ಯೆ : ಲಾ/226/ಎಲ್‌ಸಿಎಲ್/2011, ದಿನಾಂಕ 21–06–2012.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿ ರಾಮನಗರ ಜಿಲ್ಲೆಯ ರಾಮನಗರ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಹೆಚ್ಚುವರಿಯಾಗಿ 5 ನೋಟರಿ ಹುದ್ದೆಗಳನ್ನು ಸೃಜಿಸಿದ್ದು, ಅದರಂತೆ ನೋಟರಿ ಹುದ್ದೆಯನ್ನು ಭರ್ತಿ ಮಾಡಲು ನೋಟರಿಗಳ ಅಧಿನಿಯಮ/ನಿಯಮಗಳನ್ವಯ ಅಧಿಸೂಚನೆ ಹೊರಡಿಸುವ ಮೂಲಕ ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1997ರ ನಿಯಮ 12ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಜಿಲ್ಲೆ ಇವರನ್ನು ಮೇಲೆ (2) ರಲ್ಲಿ ಓದಲಾದ ದಿನಾಂಕ 03–02–2012 ರ ಪತ್ರದಲ್ಲಿ ಕೋರಲಾಗಿತ್ತು.

ಅದರಂತೆ ಮೇಲೆ (3) ರಲ್ಲಿ ಓದಲಾದ ಪತ್ರಗಳೊಂದಿಗೆ 29 ಜನರ ಮೆಮೊರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ರಾಮನಗರ ಇವರು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ (4) ರಲ್ಲಿ ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು 2009 ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ (5) ರಲ್ಲಿ ಓದಲಾದ ದಿನಾಂಕ 14–07–2010 ರ ಅಧಿಸೂಚನೆಯಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ (6) ರಲ್ಲಿ ಓದಲಾದ ದಿನಾಂಕ 21–06–2012 ರ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 226 ಎಲ್‌ಸಿಎಲ್, 2011, ಬೆಂಗಳೂರು, ದಿನಾಂಕ 06–09–2012**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ (1) ಶ್ರೀ ಎ.ಎಸ್. ನಾಗರಾಜು, ವಕೀಲರು ಸನ್ ಆಫ್ ಲೇಟ್ ನಂಜುಂಡಯ್ಯ ಆನೆದೊಡ್ಡಿ, ಕೊಳಿಗನಹಳ್ಳಿ ಅಂಚೆ, ಹಾರೋಹಳ್ಳಿ ಹೋಬಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ (2) ಶ್ರೀಮತಿ ಬಿ. ಗೀತಾ, ವಕೀಲರು, ಡಾಟರ್ ಆಫ್ ಭೋಜರಾಜ, ಕೇರಾಫ್ ಹೆಚ್. ವೀರೇಗೌಡ, ಗ್ರೇಪ್ಸ್ ಗಾರ್ಡನ್ ಹತ್ತಿರ, ಕುವೆಂಪುನಗರ, ಐಜೂರ ಬಡಾವಣೆ, ರಾಮನಗರ ಟೌನ್, ರಾಮನಗರ ಜಿಲ್ಲೆ (3) ಶ್ರೀ ಬಿ.ಎಂ. ಶ್ರೀವತ್ಸ, ವಕೀಲರು, ಸನ್ ಆಫ್ ಎಸ್. ಮಾರಯ್ಯ, ನಂ. 127, ಪಂಚವಟಿ ನಿಲಯ ಹೆಚ್.ಎಂ. ದೊಡ್ಡಿ ಎಂ.ಜಿ. ಪಾಳ್ಯ ಅಂಚೆ, ಕೈಲಾಂಚ ಹೋಬಳಿ, ರಾಮನಗರ ತಾಲ್ಲೂಕು, ರಾಮನಗರ ಜಿಲ್ಲೆ (4) ಶ್ರೀ ಆರ್.ವಿ. ದೇವರಾಜು, ವಕೀಲರು ಸನ್ ಆಫ್ ವೆಂಕಟಪ್ಪ, ನಂ. 1897, ಐಜೂರ್ ಗೀತಮಂದಿರ, ರಾಮನಗರ ಟೌನ್, ರಾಮನಗರ ಜಿಲ್ಲೆ (5) ಶ್ರೀಮತಿ ಬಿ. ಸಂಧ್ಯಾ, ವಕೀಲರು, ಡಾಟರ್ ಆಫ್ ಕೆ. ಬಾಲಸುಬ್ರಹ್ಮಣ್ಯಂ, ನಂ. 4268, ಮುಖ್ಯರಸ್ತೆ, ಮುನ್ಸಿಫಲ್ ಬಡಾವಣೆ, ರಾಮನಗರ ಟೌನ್, ರಾಮನಗರ ಜಿಲ್ಲೆ ರವರುಗಳನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ರಾಮನಗರ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ –501–0–ಇತರೆ ಸ್ವೀಕೃತಿಗಳು–06 ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ.1000/– (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಗಳನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುಕ್ಮಿಣಿ ದಿವಾಕರ್,**
ಸರ್ಕಾರದ ಅಧೀನ ಕಾರ್ಯದರ್ಶಿಗಳು (ಆಡಳಿತ–2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**PR. 43**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಹಾಸನ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ 3 ನೋಟರಿ ಹುದ್ದೆಗಳನ್ನು ತುಂಬುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಲಾ 159 ಎಲ್‌ಸಿಎಲ್ 2011, ದಿನಾಂಕ 11–11–2011.
2. ಸರ್ಕಾರದ ಪತ್ರ ಸಂಖ್ಯೆ: ಲಾ 159 ಎಲ್‌ಸಿಎಲ್ 2011, ದಿನಾಂಕ 03–01–2012.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಜಿಲ್ಲೆ ಇವರ ಅಧಿಸೂಚನೆ ಸಂಖ್ಯೆ: 01/2012, ದಿನಾಂಕ 10–01–2012.
4. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಜಿಲ್ಲೆ ಇವರ ಪತ್ರ ಸಂಖ್ಯೆ ಎಡಿಎಂ/890/2012, ದಿನಾಂಕ 22–02–2012.
5. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ ಜಿಎಸ್‌ಆರ್114(ಇ), ದಿನಾಂಕ 24–02–2009.
6. ಅಧಿಸೂಚನೆ ಸಂಖ್ಯೆ: ಲಾ 61 ಎಲ್‌ಸಿಎಲ್ 2009, ದಿನಾಂಕ 14–11–2010.
7. ಸಂದರ್ಶನ ಸೂಚನಾ ಪತ್ರ ಸಂಖ್ಯೆ : ಲಾ 159/ಎಲ್‌ಸಿಎಲ್/2011, ದಿನಾಂಕ 21–06–2012.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಾಸನ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಹೆಚ್ಚುವರಿಯಾಗಿ ಮೂರು ನೋಟರಿ ಹುದ್ದೆಗಳನ್ನು ಸೃಜಿಸಿಸಲಾಗಿದ್ದು, ಅದರಂತೆ ನೋಟರಿ ಹುದ್ದೆಯನ್ನು ಭರ್ತಿ ಮಾಡಲು ನೋಟರಿಗಳ ಅಧಿನಿಯಮ/ನಿಯಮಗಳನ್ವಯ ಅಧಿಸೂಚನೆ ಹೊರಡಿಸುವ ಮೂಲಕ ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12 ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಇವರನ್ನು ಮೇಲೆ (2) ರಲ್ಲಿ ಓದಲಾದ ದಿನಾಂಕ 03–01–2012ರ ಪತ್ರದಲ್ಲಿ ಕೋರಲಾಗಿತ್ತು.

ಅದರಂತೆ ಮೇಲೆ (3) ರಲ್ಲಿ ನಮೂದಿಸಿರುವಂತೆ ಅಧಿಸೂಚನೆ ಹೊರಡಿಸಿ, ನಂತರ 4ರಲ್ಲಿ ಓದಲಾದ ಪತ್ರಗಳೊಂದಿಗೆ 51 ಜನರ ಮೆಮೊರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಇವರು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ (5)ರಲ್ಲಿ ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ (6) ರಲ್ಲಿ ಓದಲಾದ ದಿನಾಂಕ 24–07–2010 ರ ಅಧಿಸೂಚನೆಯಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ (7) ರಲ್ಲಿ ಓದಲಾದ ದಿನಾಂಕ 21–06–2012ರ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 159 ಎಲ್‌ಸಿಎಲ್ 2011, ಬೆಂಗಳೂರು, ದಿನಾಂಕ 27–08–2012**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ (1) ಶ್ರೀ ಸಿ. ರವೀಶ್, ಹುಲಿಕಲ್, ವಕೀಲರು, ಸನ್ ಆಫ್ ಚಂದ್ರಶೇಖರ್, ಆರ್.ಓ. ಸುಬ್ರಮಣ್ಯ ನಿಲಯ, ಶಾಂತಿನಗರ, 4ನೇ ಮೈನ್, ಹಾಸನ–573201 (2) ಶ್ರೀ ಪಿ. ನಂಜಪ್ಪ, ವಕೀಲರು, ಸನ್ ಆಫ್, ಪುಟ್ಟೇಗೌಡ, ಡೋರ್ ನಂ. ಇಡಬ್ಲ್ಯೂಎಸ್ 660, 27ನೇ ಕ್ರಾಸ್, ಕುವೆಂಪುನಗರ, ಹಾಸನ–573201 ಮತ್ತು (3) ಶ್ರೀಮತಿ ಹೆಚ್.ಟಿ. ಕೋಮಲ, ವಕೀಲರು, ಡಿ/ಓ ಹೆಚ್.ಆರ್. ತಿಮ್ಮಯ್ಯ @ ತಿಮ್ಮೇಗೌಡ, ಡೋರ್ ನಂ. 2174, ಸರ್ಕಾರಿ ಕಾಲೇಜ್ ರೋಡ್, ಇರಾನಿ ಬಂಗಲೆ ಹತ್ತಿರ, ಹಳೆಯ ರಕ್ಷಣಾಪುರಂ ಅಂಚೆ ಕಛೇರಿ ಕಟ್ಟಡ, ಹಾಸನ–573201 ರವರುಗಳನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಹಾಸನ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ–501–0–ಇತರೆ ಸ್ವೀಕೃತಿಗಳು–06 ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ.1000.00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಗಳನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರುಗಳನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುಕ್ಮಿಣಿ ದಿವಾಕರ್,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**PR. 44**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಹೆಚ್. ರಾಮಕೃಷ್ಣೇಗೌಡ, ಜಂಟಿ ನಿರ್ದೇಶಕರು, ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆ, ನಿಯೋಜನೆಯ ಮೇರೆಗೆ ವಿಶೇಷಾಧಿಕಾರಿ ಎಂ.ಎಸ್.ಐ.ಎಲ್.ನಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸುವ ಬಗ್ಗೆ ಆದೇಶ –

**ಓದಲಾಗಿದೆ:**
1. ಎಂ.ಡಿ., ಎಂ.ಎಸ್.ಐ.ಎಲ್. ಬೆಂಗಳೂರು ರವರ ಪತ್ರ ಸಂಖ್ಯೆ : ಎಂ.ಡಿ. 004/2011–12, ದಿನಾಂಕ 03–05–2011.
2. ಕಾರಣ ಕೇಳುವ ನೋಟೀಸ್ ಪತ್ರ ಸಂಖ್ಯೆ : 61 ಕೈಸೇವಿ 2011, ದಿನಾಂಕ 25–07–2011.
3. ಶ್ರೀ ಹೆಚ್. ರಾಮಕೃಷ್ಣೇಗೌಡ, ಜಂಟಿ ನಿರ್ದೇಶಕರು, ಇವರ ರಕ್ಷಣಾ ಹೇಳಿಕೆ ದಿನಾಂಕ 02–09–2011.
4. ಸರ್ಕಾರದ ಪತ್ರ ಸಂಖ್ಯೆ : ವಾಕೈ 61 ಕೈಸೇವಿ 2011, ದಿನಾಂಕ 18–10–2011.
5. ವ್ಯವಸ್ಥಾಪಕ ನಿರ್ದೇಶಕರು, ಎಂ.ಎಸ್.ಐ.ಎಲ್. ಬೆಂಗಳೂರು ರವರ ಪತ್ರ ಸಂಖ್ಯೆ : ಎಂ.ಡಿ. 161/2011–12, ದಿನಾಂಕ 18–11–2011.
6. ಕಾರಣ ಕೇಳುವ ನೋಟೀಸ್ ಪತ್ರದ ಸಂಖ್ಯೆ : 61 ಕೈಸೇವಿ 2011, ದಿನಾಂಕ 21–11–2011.
7. ಅಧಿಕಾರಿಯ ರಕ್ಷಣಾ ಹೇಳಿಕೆ ದಿನಾಂಕ 07–12–2011.
8. ವ್ಯವಸ್ಥಾಪಕ ನಿರ್ದೇಶಕರು, ಎಂ.ಎಸ್.ಐ.ಎಲ್. ಬೆಂಗಳೂರು ರವರ ಪತ್ರ ಸಂಖ್ಯೆ : ಎಂ.ಡಿ. 307/2012–13, ದಿನಾಂಕ 07–12–2012.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್ ರವರು ಕಬ್ಬಿಣ ಅದಿರಿನ ರಫ್ತು ಹಗರಣಕ್ಕೆ ಸಂಬಂಧಿಸಿದಂತೆ, ಶ್ರೀ ಕುಕ್ಕಜೆ ರಾಮಕೃಷ್ಣ ಭಟ್, ನಿವೃತ್ತ ಜಿಲ್ಲಾ ನ್ಯಾಯಾಧೀಶರವರು ಸಲ್ಲಿಸಿದ ಪೂರ್ಣ ಪ್ರಮಾಣದ ಪ್ರಾಥಮಿಕ ತನಿಖಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ. ಅದರಂತೆ, ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಕಾರಣ ಕೇಳುವ ನೋಟೀಸಿನಲ್ಲಿ ಪ್ರಾಥಮಿಕ ತನಿಖಾ ವರದಿಯ ಆಧಾರದ ಮೇಲೆ ಮೇಲ್ನೋಟಕ್ಕೆ ಆರೋಪಗಳು ಕಂಡು ಬಂದಿರುವುದರಿಂದ ಆರೋಪಗಳ ಬಗ್ಗೆ ಹೇಳಿಕೆಯನ್ನು ಸಲ್ಲಿಸುವಂತೆ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 ರಡಿ ಶಿಸ್ತು ಕ್ರಮ ಪ್ರಾರಂಭಿಸಲಾಗುವುದು ಎಂದು ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಶ್ರೀ ಹೆಚ್. ರಾಮಕೃಷ್ಣೇಗೌಡ, ಜಂಟಿ ನಿರ್ದೇಶಕರು ವಿವರಣೆಯನ್ನು ಸಲ್ಲಿಸಿ, ಯಾವುದೇ ಆರೋಪ ಮಾಡಿರುವುದಿಲ್ಲ. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಸೂಚನೆಯ ಮೇರೆಗೆ ಕಾರ್ಯನಿರ್ವಹಿಸಿರುತ್ತೇನೆ. ಸಂಸ್ಥೆಗೆ ನಷ್ಟವಾಗುವಂತಹ ಯಾವುದೇ ನಿರ್ಧಾರ ತೆಗೆದುಕೊಂಡಿರುದಿಲ್ಲ ಎಂಬುದಾಗಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸುತ್ತಾ ಅವರ ಮೇಲಿನ ಪ್ರಸ್ತಾವನೆಯನ್ನು ಕೈಬಿಡಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪತ್ರದಲ್ಲಿ ಅಧಿಕಾರಿಯ ರಕ್ಷಣಾ ಹೇಳಿಕೆಯನ್ನು ವ್ಯವಸ್ಥಾಪಕ ನಿರ್ದೇಶಕರಿಗೆ ಕಳುಹಿಸಿ, ಪ್ರಸ್ತುತ ವಿಷಯದ ಬಗ್ಗೆ ಸಂಸ್ಥೆಯ ಅಂತಿಮ ತೀರ್ಮಾನವನ್ನು ಸರ್ಕಾರಕ್ಕೆ ತಿಳಿಸುವಂತೆ ಕೋರಲಾಗಿದೆ.

ಅದರಂತೆ, ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಪತ್ರದಲ್ಲಿ ಶ್ರೀ ಹೆಚ್. ರಾಮಕೃಷ್ಣೇಗೌಡರವರು ಎಂ.ಎಸ್.ಐ.ಎಲ್. ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿರುವ ಅವ್ಯವಹಾರಗಳಿಗೆ ಸಂಬಂಧಪಟ್ಟಂತೆ ಕಾರಣ ಕೇಳುವ ನೋಟೀಸ್ ಜಾರಿಗೊಳಿಸಿದ್ದು ಸದರಿ ನೋಟೀಸಿಗೆ ಅಧಿಕಾರಿಯು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು ರಕ್ಷಣಾ ಹೇಳಿಕೆಯು ಸಮಂಜಸವಲ್ಲವೆಂದು ಮತ್ತು ಪ್ರಕರಣಕ್ಕೆ ಸಂಬಂಧಿಸಿದಂತೆ, ಸದರಿ ಅಧಿಕಾರಿಯ ವಿರುದ್ಧ ಕ್ರಮ ಜರುಗಿಸಲು ದೋಷಾರೋಪಣಾ ಪಟ್ಟಿ ಹಾಗೂ ಇತರೆ ಪ್ರತಿಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6) ರ ಪತ್ರದಲ್ಲಿ ಶ್ರೀ ಹೆಚ್. ರಾಮಕೃಷ್ಣೇಗೌಡ, ಜಂಟಿ ನಿರ್ದೇಶಕರು, ಇವರಿಗೆ ನಿಯಮಾವಳಿಯನುಸಾರ ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ದಿನಾಂಕ 21–11–2011 ರಂದು ಜಾರಿ ಮಾಡಿರುತ್ತದೆ. ಅದರಂತೆ, ಸದರಿ ಅಧಿಕಾರಿಯವರು ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಲಿಖಿತ ಉತ್ತರವನ್ನು ನೀಡಿ ಆರೋಪಗಳನ್ನು ಕೈಬಿಡುವಂತೆ ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (7) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್ ರವರು ಸರ್ಕಾರದ ಆದೇಶ ಸಂಖ್ಯೆ : ವಾಕೈ 61 ಕೈಸೇವಿ 2011. ದಿನಾಂಕ 13–01–2012 ರ ಆದೇಶದಲ್ಲಿ ಸದರಿ ಪ್ರಕರಣದಲ್ಲಿ ಇಲಾಖಾ ವಿಚಾರಣಾಧಿಕಾರಿಗಳ ಮುಂದೆ ವಿಷಯವನ್ನು ಮಂಡಿಸಲು ಶ್ರೀ ಶಂಕರ್ ಚವಾಣ್, ಉಪ ಪ್ರಧಾನ ವ್ಯವಸ್ಥಾಪಕರು, ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿರುತ್ತದೆ. ಸದರಿ ಅಧಿಕಾರಿಯವರಿಗೆ ಕೆಲಸದ ಒತ್ತಡ ಇರುವುದರಿಂದ ಇವರ ಬದಲಾಗಿ ಶ್ರೀ ಬಾಲಚಂದ್ರನ್ ಸಿ. ವ್ಯವಸ್ಥಾಪಕರು, ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ಮರುನೇಮಕ ಮಾಡಬೇಕೆಂದು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಾಕೈ 61 ಕೈಸೇವಿ 2011, ಬೆಂಗಳೂರು, ದಿನಾಂಕ : 03–01–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಹೆಚ್. ರಾಮಕೃಷ್ಣೇಗೌಡ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ನಿಯೋಜನೆ ಮೇರೆಗೆ ವಿಶೇಷಾಧಿಕಾರಿ ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಕಬ್ಬಿಣದ ಅದಿರಿನ ಬಗ್ಗೆ ಮಾಡಲಾದ ಆರೋಪಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರ ಉಪನಿಯಮ 5ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಎಸ್. ಇಂಧುದರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ.8, 15ನೇ ಕ್ರಾಸ್, 5ನೇ ಫೇಸ್, ಜೆ.ಪಿ.ನಗರ, ಬೆಂಗಳೂರು ಇವರಿಗೆ ಶಿಸ್ತುಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಶ್ರೀ ಶಂಕರ್ ಚವ್ಹಾಣ್, ಉಪ ಪ್ರಧಾನ ವ್ಯವಸ್ಥಾಪಕರು, (D.G.M.) ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್, ಬೆಂಗಳೂರು ಇವರ ಬದಲಾಗಿ ಶ್ರೀ ಬಾಲಚಂದ್ರನ್ ಸಿ. ವ್ಯವಸ್ಥಾಪಕರು, ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ಮರುನೇಮಕ ಮಾಡಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್, ಬೆಂಗಳೂರು ಇಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಸ್ಥಳಾವಕಾಶ ಲಭ್ಯವಿರುವ ಶೀಘ್ರಲಿಪಿಗಾರರು/ಬೆರಳಚ್ಚುಗಾರರ ಸೇವೆಯನ್ನು ಒದಗಿಸಲು ಮತ್ತು ಅಗತ್ಯವಿರುವ ಲೇಖನ ಸಾಮಗ್ರಿಗಳನ್ನು ಒದಗಿಸಲು ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್, ಬೆಂಗಳೂರು ಇವರಿಗೆ ಸೂಚಿಸಿದೆ.

ವಿಚಾರಣಾ ವರದಿಯನ್ನು ಮೂರು ತಿಂಗಳ ಅವಧಿಯೊಳಗೆ ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸುವಂತೆ ಆದೇಶಿಸಿದೆ. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 6 ಸೇಇವಿ 2010, ದಿನಾಂಕ 28-04-2011 ರನ್ವಯ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯ ಸಂಭಾವನೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ರೇಣುಕಾರಾಧ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ. (ಸೇವೆಗಳು)

**PR. 45**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ವಿಸ್ತೃತ ಜಾಲ ಯೋಜನೆಯ (ಕೆಸ್ವಾನ್) ಯೋಜನಾ ಉಸ್ತುವಾರಿ ಸಮಿತಿ (Project Monitoring committee) ಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಇ-ಆಡಳಿತ ಕೇಂದ್ರ, ಇವರ ದಿನಾಂಕ: 28.08.2012ರ ಟಿಪ್ಪಣಿ ಸಂಖ್ಯೆ: ಸಿಇಜಿ 23 ಸ್ವಾನ್ 2012.

**ಪ್ರಸ್ತಾವನೆ:**

1. ಕರ್ನಾಟಕ ರಾಜ್ಯ ವಿಸ್ತೃತ ಜಾಲ ಯೋಜನೆಯಡಿಯಲ್ಲಿ ಒಂದು ಬೃಹತ್ ಸಂಪರ್ಕ ಜಾಲವನ್ನು ಸ್ಥಾಪಿಸಲಾಗಿದೆ. ಈ ಯೋಜನೆಯಡಿ ಧ್ವನಿ, ಮಾಹಿತಿ ಮತ್ತು ದೃಶ್ಯ ಸೇವೆಗಳನ್ನು ಸರ್ಕಾರಿ ಕಚೇರಿಗಳಿಗೆ ಒದಗಿಸಲಾಗಿದೆ. ಈ ಯೋಜನೆಯಡಿಯಲ್ಲಿ 56 ಇಲಾಖೆಗಳ 3000 ಸರ್ಕಾರಿ ಕಛೇರಿಗಳ ಮಧ್ಯೆ ಸಂಪರ್ಕವನ್ನು ಸಾಧಿಸಲಾಗಿದೆ. ಈ ತಂತ್ರಜಾಲವನ್ನು ಪ್ರಮುಖ ಇಲಾಖೆಗಳಾದ ಖಜಾನೆ, ಭೂಮಿ, ಹೆಚ್.ಆರ್.ಎಮ್.ಎಸ್, ಕಾವೇರಿ, ನ್ಯಾಯಾಂಗ, ಕೃಷಿ, ಸಾರಿಗೆ, ನಗರಾಭಿವೃದ್ಧಿ, ಆಹಾರ ಮತ್ತು ನಾಗರೀಕ ಸರಬರಾಜು ಇತ್ಯಾದಿ ಕಚೇರಿಗಳು ಬಳಸುತ್ತಿವೆ. ತಂತ್ರಜಾಲ ಸೇವೆಯನ್ನು ಮೆ॥ ಯುನೈಟೆಡ್ ಟೆಲಿಕಾಂ ಸಂಸ್ಥೆಯು ನೀಡುತ್ತಿದ್ದು, ಸಂಪರ್ಕವನ್ನು ಬಿಎಸ್ಎನ್ಎಲ್ ಸಂಸ್ಥೆಯು ನೀಡುತ್ತಿದೆ. ಕೆ.ಪಿ.ಎಂ.ಜಿ ಸಂಸ್ಥೆಯು ಈ ಯೋಜನೆಗೆ ಬಾಹ್ಯ ಲೆಕ್ಕ ಪರಿಶೋಧಕ (Third Party Auditor) ಸಂಸ್ಥೆ ಆಗಿರುತ್ತದೆ.

2. ಇತ್ತೀಚಿನ ದಿನಗಳಲ್ಲಿ ಹೆಚ್ಚು ಹೆಚ್ಚು ಕಚೇರಿಗಳು ಈ ಸಂಪರ್ಕವನ್ನು ಬಳಸಲು ಕೋರುತ್ತಿರುವ ಹಿನ್ನೆಲೆಯಲ್ಲಿ, ತಂತ್ರಜಾಲದ ಪರಿಣಾಮಕಾರಿ ಅನುಷ್ಠಾನ ಹಾಗೂ ಸರ್ಕಾರದ ಇಲಾಖೆಗಳಿಗೆ ಉತ್ತಮ ಸೇವೆ ನೀಡುವ ನಿಟ್ಟಿನಲ್ಲಿ, ಪ್ರಮುಖ ಬಳಕೆದಾರ ಇಲಾಖೆಗಳ ಮತ್ತು ಈ ಯೋಜನೆಗಾಗಿ ಸೇವೆಗಳನ್ನು ಒದಗಿಸುವ ಸಂಸ್ಥೆಗಳ ಪ್ರತಿನಿಧಿಗಳನ್ನು ಒಳಗೊಂಡ ಒಂದು ಯೋಜನಾ ಉಸ್ತುವಾರಿ ಸಮಿತಿ (Project Monitoring committee) ಯನ್ನು ಸ್ಪಷ್ಟ ರೂಪುರೇಷೆಗಳೊಂದಿಗೆ ರಚಿಸುವ ಅವಶ್ಯಕತೆಯಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ.

### ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 64 ಇಆಇ 2012: ದಿನಾಂಕ: 4ನೇ ಸೆಪ್ಟೆಂಬರ್ 2012

3. ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ(ಇ-ಆಡಳಿತ) ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡ ಕರ್ನಾಟಕ ರಾಜ್ಯ ವಿಸ್ತೃತ ಜಾಲ ಯೋಜನಾ ಉಸ್ತುವಾರಿ ಸಮಿತಿಯನ್ನು ಸರ್ಕಾರ ಈ ಮೂಲಕ ರಚಿಸಿದೆ:-

| | | | |
|---|---|---|---|
| 1. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಇ-ಆಡಳಿತ) | – | ಅಧ್ಯಕ್ಷರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ | – | ಸದಸ್ಯರು |
| 3. | ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೋಲಿಸ್ ಮತ್ತು ಐಜಿಪಿ, ಕಂಪ್ಯೂಟರ್ ವಿಂಗ್, ಎಸ್‌ಸಿಆರ್‌ಬಿ, ಬೆಂಗಳೂರು | – | ಸದಸ್ಯರು |
| 4. | ಪ್ರೋ. ದೇಬಬ್ರತ ದಾಸ್, ಪ್ರೋಫೆಸರ್, ಇಂಡಿಯನ್ ಇನ್ಸಿಟಿಟ್ಯೂಟ್ ಆಫ್ ಇನ್‌ಫರ್‌ಮೇಷನ್ ಟೆಕ್ನಾಲಜಿ (ಐಐಐಟಿ) | – | ಸದಸ್ಯರು |
| 5. | ಜಿಲ್ಲಾ ನ್ಯಾಯಾಧೀಶರು ಮತ್ತು ಕಂಪ್ಯೂಟರ್ ಯೋಜನಾ ಸಮನ್ವಯಾಧಿಕಾರಿ, ಕರ್ನಾಟಕ ಉಚ್ಚ ನ್ಯಾಯಾಲಯ | – | ಸದಸ್ಯರು |
| 6. | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಇ-ಆಡಳಿತ ಕೇಂದ್ರ | – | ಸದಸ್ಯರು |
| 7. | ಆಯುಕ್ತರು, ಭೂ ಮಾಪನ ಮತ್ತು ಭೂ ದಾಖಲೆಗಳು (ಎಸ್‌ಎಸ್‌ಎಲ್‌ಆರ್) | – | ಸದಸ್ಯರು |
| 8. | ನಿರ್ದೇಶಕರು, ಖಜಾನೆ ಇಲಾಖೆ | – | ಸದಸ್ಯರು |
| 9. | ಇನ್ಸ್‌ಪೆಕ್ಟರ್ ಜನರಲ್ ಆಫ್ ರಿಜಿಸ್ಟ್ರೇಷನ್ ಮತ್ತು ಆಯುಕ್ತರು, ಮುದ್ರಾಂಕ ಮತ್ತು ನೋಂದಾಣಿ ಇಲಾಖೆ | – | ಸದಸ್ಯರು |
| 10. | ಆಯುಕ್ತರು, ಪೌರಾಡಳಿತ ಇಲಾಖೆ | – | ಸದಸ್ಯರು |
| 11. | ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ | – | ಸದಸ್ಯರು |
| 12. | ಚೀಫ್ ಜನರಲ್ ಮ್ಯಾನೇಜರ್, ಭಾರತ್ ಸಂಚಾರ್ ನಿಗಮ ಲಿಮಿಟೆಡ್ (BSNL), ಕರ್ನಾಟಕ ವೃತ ಅಥವಾ ಅವರ ಪ್ರತಿನಿಧಿ, ಬೆಂಗಳೂರು | – | ಸದಸ್ಯರು |

| | | |
|---|---|---|
| 13. | ವ್ಯವಸ್ಥಾಪಕ ನಿರ್ದೇಶಕರು, ಮೆ॥ ಯುನೈಟೆಡ್ ಟೆಲಿಕಾಂ ನಿಯಮಿತ ಅಥವಾ ಅವರ ಪ್ರತಿನಿಧಿ | – ಸದಸ್ಯರು |
| 14. | ಕೆ.ಪಿ.ಎಮ್.ಜಿ ಹಾಗೂ ಕರ್ನಾಟಕ ವಿಸ್ತೃತ ಜಾಲ ಯೋಜನೆಯ ಬಾಹ್ಯ ಲೆಕ್ಕ ಪರಿಶೋಧಕರು (Third Party Auditor for KSWAN), ಇವರ ಪ್ರತಿನಿಧಿ | – ಸದಸ್ಯರು |
| 15. | ಯೋಜನಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯದ ಸ್ಥಳೀಯ ನಿಸ್ತಂತು ಜಾಲನೆ (Karnataka Government Secretariat LAN), ಇ–ಆಡಳಿತ ಕೇಂದ್ರ, ಬೆಂಗಳೂರು | – ಸದಸ್ಯರು |
| 16. | ಯೋಜನೆ ನಿರ್ದೇಶಕರು/ಅಧಿಕಾರಿ, ರಾಜ್ಯ ದತ್ತ ಕೇಂದ್ರ, ಇ–ಆಡಳಿತ ಕೇಂದ್ರ, ಬೆಂಗಳೂರು | – ಸದಸ್ಯರು |
| 17. | ಯೋಜನೆ ನಿರ್ದೇಶಕರು, ಕರ್ನಾಟಕ ವಿಸ್ತೃತ ಜಾಲ ಯೋಜನೆ, ಇ–ಆಡಳಿತ ಕೇಂದ್ರ | – ಸದಸ್ಯ–ಸಂಚಾಲಕರು (Member-convener) |

4. ಸದರಿ ಸಮಿತಿಯು ಈ ಕೆಳಕಂಡ ಕಾರ್ಯಗಳನ್ನು ನಿರ್ವಹಿಸತಕ್ಕದ್ದು:–

(1) ಕರ್ನಾಟಕ ರಾಜ್ಯ ವಿಸ್ತೃತ ಜಾಲ ಯೋಜನೆಯ ಪ್ರಗತಿಯ ಪುನರ್ ಅವಲೋಕನೆ ಮತ್ತು ಉಸ್ತುವಾರಿ

(2) ಆ ಯೋಜನೆಯಡಿಯಲ್ಲಿನ ತಂತ್ರಜಾಲದ ಸಮಗ್ರ ಬಳಕೆಯ ಹಾಗೂ ಇಲಾಖಾ ಮಟ್ಟದ ಬಳಕೆಯ ಉಸ್ತುವಾರಿ ಮತ್ತು ಈ ಸಂಪರ್ಕವನ್ನು ಹೆಚ್ಚಿಸುವ ಅಗತ್ಯತೆಯನ್ನು (need for scaling up connectivity both horizontally and vertically) ಪರಿಶೀಲಿಸುವುದು.

(3) ಇಲಾಖೆ / ಸಂಸ್ಥೆಗಳಿಗೆ ಸಂಬಂಧಿಸಿದಂತೆ ನೂತನ ಸಂಪರ್ಕಗಳ ಒದಗಿಸುವಿಕೆ / ಮರು ಸ್ಥಳೀಕರಣ ಮತ್ತು **"ಪಾಪ್ಸ್"** (Points of Presence) ಗಳ ಸ್ಥಳಾಂತರ, ಇವುಗಳ ಉಸ್ತುವಾರಿ ಮತ್ತು

(4) ಸರ್ಕಾರದ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಕೆಸ್ವಾನ್ ಸೇವೆಯನ್ನು ಹೆಚ್ಚು ಪರಿಣಾಮಕಾರಿಗೊಳಿಸುವ ನಿಟ್ಟಿನಲ್ಲಿ ಅಗತ್ಯ ಕ್ರಮಗಳ ಕೈಗೊಳ್ಳುವಿಕೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್.ನಾಗರಾಜ,**

ಪೀಠಾಧಿಕಾರಿ–1

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)

**PR. 47**

## ಇಂಧನ ಸಚಿವಾಲಯ

**ವಿಷಯ:** ಮೆ॥ ರಿಯೋ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರಿಗೆ ಹಂಚಿಕೆಯಾಗಿರುವ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಹಿಡ್ಕಲ್ ಡ್ಯಾಂ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 201 ಎನ್‌ಸಿಇ 2009, ದಿನಾಂಕ 19–12–2009.
2. ರಿಟ್ ಅರ್ಜಿ ಸಂಖ್ಯೆ : 12901–903/2010 ಕ್ಕೆ ಸಂಬಂಧಿಸಿದಂತೆ.
3. ಮಾನ್ಯ ಉಚ್ಚ ನ್ಯಾಯಾಲಯದ ಆದೇಶ ದಿನಾಂಕ 27–7–2012.
4. ಕಾರಣ ಕೇಳುವ ನೋಟೀಸ್ ದಿನಾಂಕ 24–7–2012.
5. ಮೆ॥ ರಿಯೋ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರ ಪತ್ರ ದಿನಾಂಕ 06–12–2012.

**ಪ್ರಸ್ತಾವನೆ:**

ಮೆ॥ ರಿಯೋ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಬೆಳಗಾಂ ಜಿಲ್ಲೆಯ ಹುಕ್ಕೇರಿ ತಾಲ್ಲೂಕಿನ ಹಿಡ್ಕಲ್ ಡ್ಯಾಂನ ಘಟಪ್ರಭಾ ಬಲದಂಡೆ ಕಾಲುವೆಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಹಿಡ್ಕಲ್ ಡ್ಯಾಂ ಕಿರು ಜಲ ವಿದ್ಯುತ್ ಯೋಜನೆಯನ್ನು (Weir-Latitude : $16^0$08'36" Longitude : $74^0$38'36" Power House-Latitude : $16^0$08'25" Longitude : $74^0$38'43") ಕೆಲವು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೆ॥ ರಿಯೋ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರು ಮೇಲ್ಕಂಡ ಯೋಜನೆ ಹಂಚಿಕೆಯಾದ ಸ್ಥಳದಲ್ಲಿ ಕೆ.ಪಿ.ಸಿ.ಎಲ್. ಸಂಸ್ಥೆಯು 20.00 ಮೆ.ವ್ಯಾ. (2x10) ಸಾಮರ್ಥ್ಯದ ಜಲ ವಿದ್ಯುತ್ ಯೋಜನೆಯನ್ನು ಸ್ಥಾಪಿಸಲು ಟೆಂಡರ್ ಕರೆದಿರುವುದರಿಂದ ಈ ಟೆಂಡರ್‌ನ್ನು ರದ್ದುಗೊಳಿಸುವಂತೆ ಹಾಗೂ ತಮ್ಮ ಕಂಪನಿಗೆ ಮಂಜೂರಾಗಿರುವ 4 ಮೆ.ವ್ಯಾ. ಸಾಮರ್ಥ್ಯದ ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 14 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಲು ಆದೇಶಿಸುವಂತೆ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ರಿಟ್ ಅರ್ಜಿಗೆ ಸಂಬಂಧಿಸಿದಂತೆ ಮಾನ್ಯ ಉಚ್ಚ ನ್ಯಾಯಾಲಯವು ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 27–07–2012ರ ಆದೇಶದಲ್ಲಿ ಈ ಕೆಳಕಂಡಂತೆ ಆದೇಶಿಸಿರುತ್ತದೆ :–

> "xx. However since the 1st respondent did not have locus standi to issue Tender Notification Annexure-H as on 17-3-2010 inasmuch as the project and the area was allotted in favour of the petitioner by then, the Tender Notification Annexure-H dated 17-3-2010 issued by the 1st respondent is liable to be quashed. Accordingly, the same stands quashed.
>
> The prayer Nos. (b) and (c) as prayed in the writ petition cannot be granted in favour of the petitioner at this stage inasmuch as it is for the State Government

to decide as to whether the project as prayed for by the 1st respondent is to be granted or not, as per law and as per the present policy. It is also for the State Government to decide the prayer of the petitioner for increasing the allotted capacity from 4 MW to 14 MW. Since the decision in the regard has to be taken by the State Government, this Court does not propose to comment anything further on that aspect of the matter."

However, it has to be made clear that the allotment order regarding the project in favour of the petitioner vide Annexure-F dated 19-12-2009 will be beneficial to the petitioner only if he complies with all the conditions attached to the said order.

Writ Petitions stand disposed of accordingly."

ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಘಟಪ್ರಭಾ ನದಿಯ ಹಿಡ್ಕಲ್ ಡ್ಯಾಂನ ಎಡ ದಂಡೆಯಲ್ಲಿ ಈಗಾಗಲೇ ಸ್ಥಾಪಿಸಿರುವ 32 ಮೆ.ವ್ಯಾ. ಸಾಮರ್ಥ್ಯದ ಜಲ ವಿದ್ಯುತ್ ಯೋಜನೆಗೆ ಪೂರಕವಾಗಿ ಹಾಲಿ ಇರುವ ಮೂಲಭೂತ ಸೌಲಭ್ಯಗಳನ್ನು ಉಪಯೋಗಿಸಿಕೊಂಡು ನದಿಯ ಬಲದಂಡೆಯಲ್ಲಿ 20 ಮೆ.ವ್ಯಾ. ಸಾಮರ್ಥ್ಯದ ಮುಂದುವರೆದ ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಉದ್ದೇಶಿಸಿರುವುದರಿಂದ ಮೆ॥ ರಿಯೋ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರಿಗೆ ಸದರಿ ಕಂಪನಿಗೆ ಯೋಜನೆ ಹಂಚಿಕೆಯಾಗಿರುವ ಆದೇಶದ ಕ್ರಮ ಸಂಖ್ಯೆ 8, 10 ಮತ್ತು 11ರ ನಿಬಂಧನೆಗಳನ್ವಯ ಯೋಜನೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ಕೋರಿ ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ನೋಂದಾಯಿತ ಅಂಚೆ ಮೂಲಕ ಕಳುಹಿಸಲಾಗಿತ್ತು.

ಮೆ॥ ರಿಯೋ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರು ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಪತ್ರದಲ್ಲಿ ಸದರಿ ನೋಟೀಸಿಗೆ ಉತ್ತರ ನೀಡಿದ್ದು, ಸದರಿ ಉತ್ತರದಲ್ಲಿ, ತಮ್ಮ ಕಂಪನಿಗೆ ಯೋಜನೆ ಹಂಚಿಕೆಗೆ ಶಿಫಾರಸ್ಸು ಮಾಡಿದ್ದ ಹಂಚಿಕೆ ಸಮಿತಿ ಸಭೆಯಲ್ಲಿ ಇತರ ಇಲಾಖೆಗಳ ಅಧಿಕಾರಿಗಳಲ್ಲದೆ ಕೆ.ಪಿ.ಸಿ.ಎಲ್. ನ ಅಧಿಕಾರಿಗಳೂ ಹಾಜರಿದ್ದರು, ರಿಟ್ ಅರ್ಜಿಯು ನ್ಯಾಯಾಲಯದಲ್ಲಿ ಬಾಕಿ ಇದ್ದುದರಿಂದ, ತಮ್ಮ ಕಂಪನಿಯು ಕ್ರೆಡಲ್‌ಗೆ ಸಲ್ಲಿಸಿದ್ದ ಸಾಮರ್ಥ್ಯ ಹೆಚ್ಚಳ ಕೋರಿಕೆಯ ಅರ್ಜಿಯನ್ನು ಪ್ರೋಸೆಸ್ ಮಾಡದೆ ಯೋಜನೆ ಅನುಷ್ಠಾನಕ್ಕೆ ವಿಳಂಬವಾಗಿದೆ. ಮಾನ್ಯ ನ್ಯಾಯಾಲಯದ ಆದೇಶದ ನಂತರ ಪುನಃ ದಿನಾಂಕ 14–8–2012 ರಂದು ಕ್ರೆಡಲ್‌ಗೆ ಡಿಪಿಆರ್ ಅನುಮೋದನೆಗಾಗಿ ಹಾಗೂ ಸಾಮರ್ಥ್ಯ ಹೆಚ್ಚಳಕ್ಕೆ ಅರ್ಜಿ ಸಲ್ಲಿಸಿರುವುದಾಗಿ, ಹಾಗೂ ಕರ್ನಾಟಕ ನೀರಾವರಿ ನಿಗಮಕ್ಕೂ ಯೋಜನೆಗೆ ಅವಶ್ಯವಿರುವ ಜಮೀನಿಗಾಗಿ ಕೋರಿಕೆ ಸಲ್ಲಿಸಿರುವುದಾಗಿ, ಡಿಪಿಆರ್ ಅನುಮೋದನೆ ಹಾಗೂ ಸಾಮರ್ಥ್ಯ ಹೆಚ್ಚಳ ಆದೇಶ ದೊರೆತೊಡನೆ ಇತರ ಇಲಾಖೆಗಳ ಅನುಮೋದನೆ/ನಿರಾಕ್ಷೇಪಣೆ ಪಡೆಯಲು ಕ್ರಮವಹಿಸುವುದಾಗಿ ತಿಳಿಸಿರುತ್ತಾರೆ.

ನ್ಯಾಯಾಲಯದ ಆದೇಶದಲ್ಲಿ ತಿಳಿಸಿರುವಂತೆ ಯಾವುದೇ ಸರ್ಕಾರಿ ಇಲಾಖೆ ಇಂತಹ ಯೋಜನೆಗಳನ್ನು ಅನುಷ್ಠಾನಗೊಳಿಸಲು ಉದ್ದೇಶಿಸಿದಲ್ಲಿ, ಆದೇಶದ ಕಂಡಿಕೆ 8 ರಡಿ ಯೋಜನೆಯನ್ನು ರದ್ದುಪಡಿಸಲು ಯೋಚಿಸಬಹುದೇ ಹೊರತು ಇತರ ಕಾರಣಗಳಿಗಲ್ಲ. ಕೆಪಿಸಿಎಲ್ ಸರ್ಕಾರಿ ಕಂಪೆನಿಯಾಗಿದ್ದರೂ ಸರ್ಕಾರಿ ಇಲಾಖೆ ಆಗಿರುವುದಿಲ್ಲ. ಹಾಗಿದ್ದರೆ, ಮಾನ್ಯ ನ್ಯಾಯಾಲಯವೇ ಅರ್ಜಿಯನ್ನು ವಜಾ ಮಾಡಿ ಕೆಪಿಸಿಎಲ್‌ಗೆ ಯೋಜನೆ ಸಂಬಂಧ ಕರೆದಿರುವ ಟೆಂಡರನ್ನು ಮುಂದುವರಿಸಲು ಆದೇಶಿಸುತ್ತಿತ್ತು. ಆದುದರಿಂದ, ಕಂಡಿಕೆ 8ರಡಿ ಯೋಜನೆಯನ್ನು ರದ್ದುಗೊಳಿಸುವುದಾಗಿ ತಿಳಿಸಿರುವ ಕ್ರಮವು ನ್ಯಾಯಾಲಯದ ಆದೇಶಕ್ಕೆ ವಿರುದ್ಧವಾಗಿದೆ. ಇನ್ನು ಕಂಡಿಕೆ 10 ನ್ನು ಕೆಪಿಸಿಎಲ್ ನ ಕ್ಲೇಮು ಮೇಲೆ ಯೋಜನೆ ಹಂಚಿಕೆ ಮಾಡಬೇಕೆಂಬ ಕಾರಣದಿಂದ ಚಲಾಯಿಸಲು ಬರುವುದಿಲ್ಲ. ಹಾಗೆಯೇ, ಕಂಡಿಕೆ 11 ಸಾಮಾನ್ಯ ಅಧಿಕಾರವಾಗಿದ್ದು, ಯೋಜನಾದಾರರು ಒಡಂಬಡಿಕೆಯ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ ಚಲಾಯಿಸಬೇಕೇ ಹೊರತು ಮನಸೋಇಚ್ಚೆ ಚಲಾಯಿಸಲು ಬರುವುದಿಲ್ಲವೆಂದು ತಿಳಿಸುತ್ತಾ ತಮ್ಮ ಕಂಪನಿಗೆ ನೀಡಿರುವ ಕಾರಣ ಕೇಳುವ ನೋಟೀಸನ್ನು ಹಿಂಪಡೆದು ಯೋಜನೆ ಅನುಷ್ಠಾನಕ್ಕೆ ಅನುವು ಮಾಡಿಕೊಡುವಂತೆ ಕೋರಿರುತ್ತಾರೆ.

ಅಭಿವೃದ್ಧಿದಾರರು ಉತ್ತರದಲ್ಲಿ ನೀಡಿರುವ ಕಾರಣಗಳು ಸಮಾಧಾನಕರವಾಗಿರುವುದಿಲ್ಲ. ಕೆಪಿಸಿಎಲ್ ಒಂದು ಸರ್ಕಾರಿ ಸಂಸ್ಥೆಯಾಗಿದ್ದು, ಇದರ ಪ್ರಮುಖ ಕಾರ್ಯ ವಿದ್ಯುತ್ ಉತ್ಪಾದನೆಯಾಗಿದ್ದು, ರಾಜ್ಯದ ಜನತೆಗೆ ವಿದ್ಯುತ್ ಒದಗಿಸುವ ಸರ್ಕಾರಿ ಸ್ವಾಮ್ಯದ ಸಂಸ್ಥೆಯಾಗಿದೆ. ಸದರಿ ಅಭಿವೃದ್ಧಿದಾರರು ಸಂಬಂಧಪಟ್ಟ ಇಲಾಖೆಗಳಿಂದ ಯೋಜನೆಯ ಅನುಷ್ಠಾನಕ್ಕೆ ಅನುಮೋದನೆಯನ್ನು ಪಡೆಯಬೇಕಾಗಿದ್ದು, ಇದುವರೆವಿಗೂ ಯಾವುದೇ ಅನುಮೋದನೆಯನ್ನು ಪಡೆದಿರುವುದಿಲ್ಲ. ಮತ್ತು ಯಾವುದೇ ಕಾಮಗಾರಿಯನ್ನು ಪ್ರಾರಂಭಿಸಿರುವುದಿಲ್ಲ. ಕೆಪಿಸಿಎಲ್ ಈಗಾಗಲೇ ಹೊಂದಿರುವ 32 ಮೆ.ವ್ಯಾ. ಸಾಮರ್ಥ್ಯದ ಜಲ ವಿದ್ಯುತ್ ಯೋಜನೆಯ ವಿಸ್ತರಣೆಯಾಗಿ ಹಾಲಿ ಇರುವ ಸೌಲಭ್ಯಗಳನ್ನು ಉಪಯೋಗಿಸಿಕೊಂಡು ಬಲ ದಂಡೆಯಲ್ಲಿ 20 ಮೆ.ವ್ಯಾ. ಸಾಮರ್ಥ್ಯದ ಮುಂದುವರೆದ ಜಲ ವಿದ್ಯುತ್ ಯೋಜನೆಯನ್ನು ಕೈಗೊಳ್ಳಲಿದೆ. ಇದರಿಂದ ಈ ಯೋಜನೆಯ ಒಟ್ಟು ಸಾಮರ್ಥ್ಯವು 52 ಮೆ.ವ್ಯಾ. ಆಗಲಿದ್ದು, ಕಿರು ಜಲ ವಿದ್ಯುತ್ ಯೋಜನೆಯ ವ್ಯಾಪ್ತಿಯಲ್ಲಿ ಬರುವುದಿಲ್ಲ. ಅಲ್ಲದೇ, ಅರಣ್ಯ ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆಯು ದಿನಾಂಕ 14–3–2011ರ ಪತ್ರ ಸಂಖ್ಯೆ FEE 59 ECO 2010 ಕೆಪಿಸಿಎಲ್‌ನ ಈ ವಿಸ್ತರಿಸಿದ 2x10 = 20 ಮೆ.ವ್ಯಾ. ಸಾಮರ್ಥ್ಯದ ಜಲ ವಿದ್ಯುತ್ ಯೋಜನೆಗೆ Environmental Cleareance ನೀಡಿದೆ. ಕೆಪಿಸಿಎಲ್ ಈ ಯೋಜನೆಯನ್ನು 18 ತಿಂಗಳೊಳಗೆ ಕಾರ್ಯರೂಪಕ್ಕೆ ತರಲಾಗುವುದೆಂದು ತಿಳಿಸಿದ್ದು, ಇದರಿಂದ ರಾಜ್ಯಕ್ಕೆ ಹೆಚ್ಚಿನ ಪ್ರಮಾಣದ ವಿದ್ಯುತ್ ದೊರೆಯುತ್ತದೆ ಮತ್ತು ಇದರಲ್ಲಿ ಸಾರ್ವಜನಿಕ ಹಿತಾಸಕ್ತಿ ಒಳಗೊಂಡಿದೆ.

ಆದ್ದರಿಂದ, ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 101 ಎನ್‌ಸಿಇ 2012, ಬೆಂಗಳೂರು, ದಿನಾಂಕ : 31–12–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ : ಇಎನ್ 201 ಎನ್‌ಸಿಇ 2009 ದಿನಾಂಕ 19–12–2009 ರಲ್ಲಿ ಮೆ॥ ರಿಯೋ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬೆಳಗಾಂ ಜಿಲ್ಲೆಯ ಹುಕ್ಕೇರಿ ತಾಲ್ಲೂಕಿನ ಹಿಡ್ಕಲ್ ಡ್ಯಾಂನ ಘಟಪ್ರಭಾ ಬಲದಂಡೆ ಕಾಲುವೆಗೆ

ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಹಿಡ್ಕಲ್ ಡ್ಯಾಂ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೌಸಲ್ಯಾ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

PR. 67

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಮೆ॥ ಎನ್.ಎಸ್.ಎಲ್. ಶುಗರ್ಸ್ ಲಿ., ಬೆಂಗಳೂರು, ಇವರು ಗುತ್ತಿಗೆ ಪಡೆದಿರುವ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಭೂಸನೂರು, ಆಳಂದ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಇದರ ಕಬ್ಬು ನುರಿಸುವ ಸಾಮರ್ಥ್ಯವನ್ನು 5000 ಟಿಸಿಡಿ ಇಂದ 7500 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರ ಸಂಖ್ಯೆ : ಡಿಎಸ್‌ಕೆ/ಎಫ್.ಐ.ಎನ್/26/2010–2011, ದಿನಾಂಕ 13–07–2012 ಮತ್ತು 05–10–2012.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು ಕಬ್ಬು ಅಭಿವೃದ್ಧಿರವರ ದಿನಾಂಕ 13–07–2012 ಮತ್ತು 05–10–2012ರ ಪತ್ರಗಳಲ್ಲಿ ಮೆ॥ ಎನ್.ಎಸ್.ಎಲ್. ಶುಗರ್ಸ್ ಲಿ., ಬೆಂಗಳೂರು, ಇವರು ಗುತ್ತಿಗೆ ಪಡೆದಿರುವ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಭೂಸನೂರು, ಆಳಂದ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಇದರ ಕಬ್ಬು ನುರಿಸುವ ಸಾಮರ್ಥ್ಯವನ್ನು 5000 ಟಿಸಿಡಿ ಇಂದ 7500 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಉದ್ದೇಶಿಸಿರುತ್ತಾರೆಂದು ತಿಳಿಸಿ, ಈ ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಗೆ ಸರ್ಕಾರದ ಅನುಮತಿಯನ್ನು ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 119 ಎಸ್‌ಜಿಎಫ್ 2012, ಬೆಂಗಳೂರು, ದಿನಾಂಕ : 29–12–2012**

ಮೆ॥ ಎನ್.ಎಸ್.ಎಲ್. ಶುಗರ್ಸ್ ಲಿ., ಬೆಂಗಳೂರು, ಇವರು ಗುತ್ತಿಗೆ ಪಡೆದಿರುವ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಭೂಸನೂರು, ಆಳಂದ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಇದರ ಕಬ್ಬು ನುರಿಸುವ ಸಾಮರ್ಥ್ಯವನ್ನು 5000 ಟಿಸಿಡಿ ಇಂದ 7500 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಕೆಳಕಂಡ ಷರತ್ತಿಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಿದೆ.

1. ಅಕ್ಕಪಕ್ಕದ ಕಾರ್ಖಾನೆಗಳಿಗೆ ಅಗತ್ಯವಿರುವ ಕಬ್ಬಿಗೆ ಯಾವುದೇ ತೊಂದರೆಯಾಗದಂತಿರತಕ್ಕದ್ದು.
2. ಕಾರ್ಖಾನೆಗೆ ಹೆಚ್ಚುವರಿಯಾಗಿ ಬೇಕಾಗುವ ಕಬ್ಬನ್ನು, ಕಾರ್ಖಾನೆಗೆ ಹಂಚಿಕೆಯಾಗಿರುವ ಕಬ್ಬಿನ ಪ್ರದೇಶಗಳನ್ನು ಅಭಿವೃದ್ಧಿಪಡಿಸಿಕೊಳ್ಳುವ ಮೂಲಕ ಪಡೆದುಕೊಳ್ಳತಕ್ಕದ್ದು ಹಾಗೂ ಹೆಚ್ಚುವರಿ ಕಬ್ಬು ಮೀಸಲು ಕ್ಷೇತ್ರಗಳನ್ನು ಹಂಚಿಕೆ ಮಾಡಲು ಬೇಡಿಕೆ ಸಲ್ಲಿಸತಕ್ಕದ್ದಲ್ಲ.
3. ಕಬ್ಬು ಅರೆಯುವ ಸಾಮರ್ಥ್ಯ ಹೆಚ್ಚಿಸಿಕೊಳ್ಳಲು ಅವಶ್ಯಕ ಬಂಡವಾಳವನ್ನು ಗುತ್ತಿಗೆದಾರರೇ ಭರಿಸತಕ್ಕದ್ದು.
4. ವಿಸ್ತರಿಸಿದ ಸಾಮರ್ಥ್ಯಕ್ಕೆ ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ನಿರಾಕ್ಷೇಪಣಾ ಪತ್ರವನ್ನು ಪಡೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ. ಪರಮೇಶ್ವರಪ್ಪ,**
ಪೀಠಾಧಿಕಾರಿ (ಸಕ್ಕರೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

PR. 68

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಮೆ॥ ಎನ್.ಎಸ್.ಎಲ್. ಶುಗರ್ಸ್, ಕೊಪ್ಪ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ ಈ ಕಾರ್ಖಾನೆಯ ಕಬ್ಬು ನುರಿಸುವ ಹಾಲಿ 5000 ಟಿಸಿಡಿ ಸಾಮರ್ಥ್ಯವನ್ನು 6000 ಟಿಸಿಡಿಗೆ ಸಾಮರ್ಥ್ಯಕ್ಕೆ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರ ಸಂಖ್ಯೆ : ಡಿಎಸ್‌ಕೆ/ಡಿ.ಇ.ವಿ./70/2006–2007, ದಿನಾಂಕ 02–08–2012.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು ಕಬ್ಬು ಅಭಿವೃದ್ಧಿರವರ ದಿನಾಂಕ 02–08–2012 ರ ಪತ್ರದಲ್ಲಿ ಮೆ॥ ಎನ್.ಎಸ್.ಎಲ್. ಶುಗರ್ಸ್, ಕೊಪ್ಪ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ ಇದರ ಹಾಲಿ 5000 ಟಿಸಿಡಿ ಕಬ್ಬು ನುರಿಸುವ ಸಾಮರ್ಥ್ಯವನ್ನು 6000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಉದ್ದೇಶಿಸಿರುತ್ತಾರೆಂದು ತಿಳಿಸಿ, ಈ ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಗೆ ಸರ್ಕಾರದ ಅನುಮತಿಯನ್ನು ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 116 ಎಸ್‌ಜಿಎಫ್ 2012, ಬೆಂಗಳೂರು, ದಿನಾಂಕ : 29–12–2012**

ಮೆ॥ ಎನ್.ಎಸ್.ಎಲ್. ಶುಗರ್ಸ್, ಕೊಪ್ಪ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ ಇದರ ಕಬ್ಬು ನುರಿಸುವ ಹಾಲಿ 5000 ಟಿಸಿಡಿ ಸಾಮರ್ಥ್ಯವನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು 6000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಕೆಳಕಂಡ ಷರತ್ತಿಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಿದೆ.

1. ಸಂಬಂಧಪಟ್ಟ ಕಾರ್ಖಾನೆಗೆ ಹಂಚಿಕೆ ಮಾಡಲಾದ ಪ್ರದೇಶಗಳಲ್ಲಿ ಸಾಕಷ್ಟು ಕಬ್ಬಿನ ಲಭ್ಯತೆ ಇರಬೇಕು.
2. ಅಕ್ಕಪಕ್ಕದ ಕಾರ್ಖಾನೆಗಳಿಗೆ ಅಗತ್ಯವಿರುವ ಕಬ್ಬಿಗೆ ಯಾವುದೇ ತೊಂದರೆಯಾಗದಂತಿರಬೇಕು.
3. ಹೆಚ್ಚಿಸಲ್ಪಟ್ಟಿರುವ ಸಾಮರ್ಥ್ಯಕ್ಕೆ ಬೇಕಾದ ಕಬ್ಬನ್ನು ಹಾಲಿ ಹಂಚಿಕೆ ಮಾಡಿರುವ ಕಬ್ಬಿನ ಕ್ಷೇತ್ರಗಳ ಪರಿಮಿತಿಯೊಳಗೆ ವಿಸ್ತರಣೆ ಮಾಡಿಕೊಳ್ಳಬೇಕು ಹಾಗೂ ಹೆಚ್ಚುವರಿ ಕಬ್ಬು ಮೀಸಲು ಕ್ಷೇತ್ರ ಹಂಚಿಕೆ ಮಾಡುವಂತೆ ಬೇಡಿಕೆ ಸಲ್ಲಿಸಬಾರದು.
4. ವಿಸ್ತರಿಸಿದ ಸಾಮರ್ಥ್ಯಕ್ಕೆ ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ನಿರಾಕ್ಷೇಪಣಾ ಪತ್ರವನ್ನು ಪಡೆದುಕೊಳ್ಳಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ಪರಮೇಶ್ವರಪ್ಪ,**

ಪೀಠಾಧಿಕಾರಿ (ಸಕ್ಕರೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**PR. 69**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:** ಕರ್ನಾಟಕದ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಶುಲ್ಕ ವಿನಾಯಿತಿ/ಮರುಪಾವತಿ ಯೋಜನೆಯನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯುಎಲ್ 229 ಬಿಸಿಎ 80 ದಿನಾಂಕ 16–12–1982.
2. ಸರ್ಕಾರದ ಆದೇಶ ಸಂಖ್ಯೆ: ಸಕಇ 201 : ಬಿಎಂಎಸ್ 2012, ದಿನಾಂಕ 23–6–2012.
3. ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಪ್ರಸ್ತಾವನೆ ಸಂಖ್ಯೆ: ಹಿಂವಕಇ:ಶುವಿ: ಸಿಆರ್–9 : 2011–12, ದಿನಾಂಕ 06–11–2012.

**ಪ್ರಸ್ತಾವನೆ:**

1. ಉಲ್ಲೇಖದಲ್ಲಿನ ಸರ್ಕಾರದ ಆದೇಶಗಳನ್ನು ಓದಲಾಗಿದೆ.

2. ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಶುಲ್ಕ ಮರುಪಾವತಿಯ ನಿಯಮಗಳನ್ನು 1982 ರಲ್ಲಿ ಜಾರಿಗೆ ತಂದಿದ್ದು, ತದನಂತರ ಸಾಕಷ್ಟು ಬದಲಾವಣೆಗಳು ಆಗಿರುವ ಹಿನ್ನೆಲೆಯಲ್ಲಿ ಮತ್ತು ಈ ಹಿಂದೆ ಮಂಜೂರಾತಿಯನ್ನು ಬೇರೆ ಬೇರೆ ಇಲಾಖೆಗಳ ಅಧಿಕಾರಿಗಳು ಮಾಡುತ್ತಿದ್ದು, ಶುಲ್ಕ ಮರುಪಾವತಿಯಲ್ಲಿ ಗೊಂದಲಗಳಾಗಿ ಅನೇಕ ಸಮಸ್ಯೆಗಳು ಎದುರಾಗಿವೆ. ಆದುದರಿಂದ ನಿಯಮಗಳನ್ನು ಪರಿಷ್ಕರಿಸಿ ಹೊಸ ಯೋಜನೆಯನ್ನು ರೂಪಿಸಬೇಕಾಗಿದೆ ಎಂದು ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಪ್ರಸ್ತಾವನೆಯನ್ನು ಸಲ್ಲಿಸಿದ್ದ ಮೇರೆಗೆ ಪರಿಷ್ಕೃತ ಯೋಜನೆಯನ್ನು ಸರ್ಕಾರದ ಆದೇಶ ಸಂಖ್ಯೆ : ಸಕಇ 201 ಬಿಎಂಎಸ್ 2012, ದಿನಾಂಕ 23–6–2012 ರಲ್ಲಿ ಹೊರಡಿಸಲಾಗಿದೆ.

3. ಆದರೆ, ಪ್ರವರ್ಗ–1 ಕ್ಕೆ ಇದುವರೆವಿಗೆ ಆದಾಯ ಮಿತಿ ಇಲ್ಲದೆ ಇದ್ದು, ಅದನ್ನು ವಾರ್ಷಿಕ ರೂ. 1.00 ಲಕ್ಷಕ್ಕೆ ಮಿತಿಗೊಳಿಸಿರುವುದನ್ನು ಸಡಿಲಿಸಬೇಕೆಂದು, ರೂ. 44,500/– ರ ವಾರ್ಷಿಕ ಆದಾಯ ಮಿತಿಯಲ್ಲಿರುವ ಎಲ್ಲಾ ವಿದ್ಯಾರ್ಥಿಗಳಿಗೆ ಈ ಹಿಂದಿನಂತೆ ಶುಲ್ಕ ವಿನಾಯಿತಿ ನೀಡಬೇಕೆಂದು ಮನವಿಗಳು ಬಂದಿದ್ದು, ಈ ಸಂಬಂಧ ಪರಿಷ್ಕೃತ ಆದೇಶವನ್ನು ಹೊರಡಿಸಬೇಕೆಂದು ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

4. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಈಗ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ವಿದ್ಯಾರ್ಥಿಗಳ ಕುಟುಂಬದವರ ವಾರ್ಷಿಕ ವರಮಾನವನ್ನು ರೂ. 2.00 ಲಕ್ಷಕ್ಕೆ ನಿಗಧಿಪಡಿಸಲಾಗಿದೆ. ಅದರಂತೆ ಹಿಂದುಳಿದ ವರ್ಗಗಳ ಪ್ರವರ್ಗ–1 ವಿದ್ಯಾರ್ಥಿಗಳ ಕುಟುಂಬದ ವಾರ್ಷಿಕ ವರಮಾನದ ಮಿತಿಯನ್ನು ರೂ. 2.00 ಲಕ್ಷಕ್ಕೆ ಹೆಚ್ಚಿಸಲು ಹಾಗೂ ರೂ. 44,500/– ರ ಕುಟುಂಬದ ವಾರ್ಷಿಕ ವರಮಾನ ಮಿತಿಯಲ್ಲಿರುವ ಇತರೆ ಎಲ್ಲಾ ಸಮುದಾಯದ ವಿದ್ಯಾರ್ಥಿಗಳಿಗೆ ನಿಗದಿತ ಶುಲ್ಕಗಳಲ್ಲಿನ ವಿನಾಯಿತಿ ನೀಡಬೇಕೆಂದು ಸರ್ಕಾರ ತೀರ್ಮಾನಿಸಿದೆ.

ಈ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಕಇ 357 ಬಿಎಂಎಸ್ 2012, ಬೆಂಗಳೂರು, ದಿನಾಂಕ : 07–11–2012**

1. ಶುಲ್ಕ ವಿನಾಯಿತಿಗೆ / ಮರುಪಾವತಿಗೆ ವಿದ್ಯಾರ್ಥಿಗಳ ಅರ್ಹತೆ :
    1. ವಿದ್ಯಾರ್ಥಿ/ತಂದೆ/ತಾಯಿ/ಪೋಷಕರ ವಾರ್ಷಿಕ ವರಮಾನ ರೂ.44,500/–ರ ಮಿತಿಯೊಳಗಿರುವ ಎಲ್ಲಾ ಧರ್ಮಗಳ, ಜಾತಿಗಳ ಹಾಗೂ ಸಮುದಾಯಗಳ ವಿದ್ಯಾರ್ಥಿಗಳು ಮತ್ತು ರೂ. 2.00 ಲಕ್ಷಗಳ ಮಿತಿಯೊಳಗಿರುವ ಹಿಂದುಳಿದ ವರ್ಗಗಳ ಪ್ರವರ್ಗ–1 ರ ವಿದ್ಯಾರ್ಥಿಗಳು ನಿಗದಿತ ಶುಲ್ಕ ಮರುಪಾವತಿಗೆ/ಶುಲ್ಕ ವಿನಾಯಿತಿಗೆ ಅರ್ಹರಾಗಿರುತ್ತಾರೆ.
    2. ಭಾರತದ ಪ್ರಜೆಯಾಗಿದ್ದು, ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಕನಿಷ್ಠ 7 ವರ್ಷ ಕರ್ನಾಟಕದಲ್ಲಿ ವ್ಯಾಸಂಗ ಮಾಡಿರತಕ್ಕದ್ದು.
    3. ಸರ್ಕಾರಿ/ಸ್ಥಳೀಯ ಸಂಸ್ಥೆ/ಅನುದಾನಿತ ಸಂಸ್ಥೆಗಳು/ಮಾನ್ಯತೆ ಪಡೆದ ಅನುದಾನ ರಹಿತ ಖಾಸಗಿ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳು ಅರ್ಹರಿರುತ್ತಾರೆ.
    4. ಕರ್ನಾಟಕದ ಶಾಸನಬದ್ಧ ವಿಶ್ವವಿದ್ಯಾಲಯಗಳ ಅಧೀನಕ್ಕೆ ಒಳಪಡುವ ಸರ್ಕಾರಿ/ಸ್ಥಳೀಯ ಸಂಸ್ಥೆ/ಅನುದಾನಿತ ಸಂಸ್ಥೆಗಳು/ಮಾನ್ಯತೆ ಪಡೆದ ಅನುದಾನ ರಹಿತ ಖಾಸಗಿ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡುವ ಮೆಟ್ರಿಕ್ ನಂತರದ ವಿದ್ಯಾರ್ಥಿಗಳು ಅರ್ಹರಿರುತ್ತಾರೆ.

5. ವಿದ್ಯಾರ್ಥಿಗಳು ಹಿಂದಿನ ವರ್ಷದ ಪಬ್ಲಿಕ್ ಪರೀಕ್ಷೆಯಲ್ಲಿ ಎಲ್ಲಾ ವಿಷಯಗಳಲ್ಲಿ ಉತ್ತೀರ್ಣರಾಗದಿದ್ದಲ್ಲಿ ಮುಂದಿನ ವರ್ಷದಲ್ಲಿ ಶುಲ್ಕ ಮರುಪಾವತಿಗೆ ಅರ್ಹರಾಗುವುದಿಲ್ಲ. ಆದರೆ ಆ ಕೋರ್ಸ್‌ಗಳಲ್ಲಿ ಕ್ಯಾರಿಓವರ್ ಪದ್ಧತಿ ಜಾರಿ ಇದ್ದು ಮುಂದಿನ ತರಗತಿಗೆ/ವರ್ಷಕ್ಕೆ ಪ್ರವೇಶಕ್ಕೆ ಅವಕಾಶವಿದ್ದಲ್ಲಿ ಅಂತಹವರು ಶುಲ್ಕ ಮರುಪಾವತಿಗೆ ಅರ್ಹರಿರುತ್ತಾರೆ.

   ಮುಂದಿನ ವರ್ಷದಲ್ಲಿ, ಹಿಂದಿನ ಬಾಕಿ ವಿಷಯಗಳೂ ಸೇರಿದಂತೆ ಆ ವರ್ಷದ ಎಲ್ಲಾ ವಿಷಯಗಳಲ್ಲಿ ಉತ್ತೀರ್ಣರಾಗಿದ್ದಲ್ಲಿ ಮಾತ್ರ ನಂತರದ ವರ್ಷದಲ್ಲಿ ಶುಲ್ಕ ಮರುಪಾವತಿಗೆ ಅರ್ಹರಾಗುತ್ತಾರೆ.

6. ಯಾವ ಸರ್ಕಾರಿ/ಖಾಸಗಿ ಸಂಸ್ಥೆಗಳಲ್ಲಿ, ಉಚಿತ ಶಿಕ್ಷಣ ನೀಡಲಾಗುತ್ತದೋ (ಯಾವ ಸಂಸ್ಥೆಗಳಲ್ಲಿ ವಿದ್ಯಾರ್ಥಿಗಳಿಂದ ಶುಲ್ಕವನ್ನು ವಸೂಲಿ ಮಾಡುವುದಿಲ್ಲವೋ), ಅಂತಹ ಸಂಸ್ಥೆಗಳು ಮತ್ತು ಅಲ್ಲಿನ ವಿದ್ಯಾರ್ಥಿಗಳು, ಶುಲ್ಕ ಮರುಪಾವತಿಗೆ ಅರ್ಹರಿರುವುದಿಲ್ಲ.

7. ಪರೀಕ್ಷಾ ಶುಲ್ಕವನ್ನು ವರ್ಷಕ್ಕೆ ಒಮ್ಮೆ ಮರುಪಾವತಿಸಲಾಗುವುದು. ಅನುತ್ತೀರ್ಣರಾದ ಅಭ್ಯರ್ಥಿಗಳು ಹಾಗೂ ಸಪ್ಲಿಮೆಂಟರಿ ಪರೀಕ್ಷೆ ತೆಗೆದುಕೊಳ್ಳುವವರು ಪರೀಕ್ಷಾ ಶುಲ್ಕ ಮರುಪಾವತಿಗೆ ಅರ್ಹರಲ್ಲ.

8. ಒಂದು ಮೂಲದಿಂದ ಈಗಾಗಲೇ ಶುಲ್ಕ ಮರುಪಾವತಿ ಪಡೆದಿದ್ದಲ್ಲಿ, ಅಂತಹವರು ಪುನಃ ಈ ಯೋಜನೆಯಡಿ ಶುಲ್ಕ ಮರುಪಾವತಿಗೆ/ ವಿನಾಯಿತಿಗೆ ಅರ್ಹರಿರುವುದಿಲ್ಲ.

**2.** (ಅ) **ವಿನಾಯಿತಿಗೆ/ಮರುಪಾವತಿಗೆ ಅರ್ಹ ಇರುವ ಶುಲ್ಕಗಳು :**

| ಪ್ರವರ್ಗ–1 ರ ವಿದ್ಯಾರ್ಥಿಗಳು | ಇತರೆ ಸಮುದಾಯಗಳ ವಿದ್ಯಾರ್ಥಿಗಳು |
|---|---|
| ಪರೀಕ್ಷಾ ಶುಲ್ಕ | ಪರೀಕ್ಷಾ ಶುಲ್ಕ |
| ಬೋಧನಾ ಶುಲ್ಕ | ಬೋಧನಾ ಶುಲ್ಕ |
| ಪ್ರಯೋಗಾಲಯ ಶುಲ್ಕ (ವಿಜ್ಞಾನ, ವೈದ್ಯಕೀಯ ಮತ್ತು ತಾಂತ್ರಿಕ ಕೋರ್ಸುಗಳಿಗೆ) | ಪ್ರಯೋಗಾಲಯ ಶುಲ್ಕ (ವಿಜ್ಞಾನ, ವೈದ್ಯಕೀಯ ಮತ್ತು ತಾಂತ್ರಿಕ ಕೋರ್ಸುಗಳಿಗೆ) |
| ಕ್ರೀಡಾ ಶುಲ್ಕ | – |
| ಗ್ರಂಥಾಲಯ ಶುಲ್ಕ | – |

(ಆ) ಎಸ್.ಎಸ್.ಎಲ್.ಸಿ. ಪರೀಕ್ಷಾ ಶುಲ್ಕವನ್ನು ಎಲ್ಲಾ ಅರ್ಹ ವಿದ್ಯಾರ್ಥಿಗಳಿಗೆ ಪಾವತಿಸಲಾಗುವುದು.

**3. ಶುಲ್ಕ ಮರುಪಾವತಿ ಮಂಜೂರಾತಿ ಪ್ರಾಧಿಕಾರ :**

ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು ಆಯಾ ಜಿಲ್ಲೆಗಳಲ್ಲಿ ನಿಗದಿತ ಶುಲ್ಕಗಳನ್ನು ಮರುಪಾವತಿ ಮಂಜೂರು ಮಾಡಲು ಅಧಿಕಾರ ಹೊಂದಿರುತ್ತಾರೆ.

**4. ಶಿಕ್ಷಣ ಸಂಸ್ಥೆಗಳು ಪ್ರವೇಶದ ಸಮಯದಲ್ಲಿ ಶುಲ್ಕ ಪಡೆಯುವ ಬಗ್ಗೆ :**

(ಅ) **ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳಿಗೆ :** 'ಮೂಲ ಜಾತಿ ಮತ್ತು ಆದಾಯದ ಪ್ರಮಾಣ ಪತ್ರಗಳನ್ನು ಸಲ್ಲಿಸಿದ ಅರ್ಹ ವಿದ್ಯಾರ್ಥಿಗಳಿಂದ ಪರೀಕ್ಷಾ ಶುಲ್ಕವನ್ನು ಸಂಸ್ಥೆಗಳು ಪಡೆಯತಕ್ಕದ್ದಲ್ಲ. ಇದನ್ನು ಹಿಂದುಳಿದ ವರ್ಗಗಳ ಇಲಾಖೆಯಿಂದ ಮಂಜೂರು ಮಾಡಿ ಸಂಬಂಧಿಸಿದ ಶಿಕ್ಷಣ ಸಂಸ್ಥೆಗೆ ಪಾವತಿಸಲಾಗುವುದು.

(ಆ) **ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ :** ಕಾಲೇಜು/ಶಿಕ್ಷಣ ಸಂಸ್ಥೆಗೆ ಪ್ರವೇಶ ಪಡೆಯುವ ಸಮಯದಲ್ಲಿ, ಮೂಲ ಜಾತಿ ಮತ್ತು ಆದಾಯದ ಪ್ರಮಾಣ ಪತ್ರಗಳನ್ನು ಸಲ್ಲಿಸಿದ ಅರ್ಹ ವಿದ್ಯಾರ್ಥಿಗಳಿಂದ, ಶಿಕ್ಷಣ ಸಂಸ್ಥೆಗಳು ಶುಲ್ಕವನ್ನು ಮರುಪಾವತಿಸಬಹುದಾದ (ಕಂಡಿಕೆ 2ರಂತೆ) ಶುಲ್ಕಗಳನ್ನು ಪಡೆಯತಕ್ಕದ್ದಲ್ಲ. ಸದರಿ ಶುಲ್ಕಗಳನ್ನು ಹಿಂದುಳಿದ ವರ್ಗಗಳ ಇಲಾಖೆಯಿಂದ ಕಾಲೇಜುಗಳಿಗೆ ಪಾವತಿಸಲಾಗುವುದು.

**5. ಮಂಜೂರಾದ ಮೊತ್ತವನ್ನು ಜಮಾ ಮಾಡುವ ವಿಧಾನ :**

ಅ) ಶುಲ್ಕ ಮರುಪಾವತಿ ಬಾಬ್ತು, ಪ್ರತ್ಯೇಕ ಜಂಟಿ ಖಾತೆಯನ್ನು, ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ ಹಾಗೂ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಇವರ ಪದನಾಮದಲ್ಲಿ ತೆರೆಯಬೇಕು.

ಆ) ವಿದ್ಯಾರ್ಥಿಗಳಿಗೆ ಮಂಜೂರು ಮಾಡಿದ ಎಸ್.ಎಸ್.ಎಲ್.ಸಿ. ಪರೀಕ್ಷಾ ಶುಲ್ಕವನ್ನು, ಆಯಾಯ ಶಿಕ್ಷಣ ಸಂಸ್ಥೆಗಳು ಷೆಡ್ಯೂಲ್ಡ್ ಬ್ಯಾಂಕಿನಲ್ಲಿ ತೆರೆದ ಬ್ಯಾಂಕ್ ಖಾತೆಗಳಿಗೆ ನೇರವಾಗಿ NEFT/RTGS ವ್ಯವಸ್ಥೆಯ ಮೂಲಕ ಜಮಾ ಮಾಡಲಾಗುವುದು. ಈ ಮೊತ್ತವನ್ನು ಆ ಶಿಕ್ಷಣ ಸಂಸ್ಥೆಯ ಮುಖ್ಯಸ್ಥರು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಗೆ ಮರು ಜಮಾ ಮಾಡುವುದು.

ಇ) ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಮಂಜೂರು ಮಾಡಿದ ಶುಲ್ಕಗಳನ್ನು ಆಯಾಯ ಶಿಕ್ಷಣ ಸಂಸ್ಥೆಗಳು ಷೆಡ್ಯೂಲ್ಡ್ ಬ್ಯಾಂಕಿನಲ್ಲಿ ತೆರೆದ ಬ್ಯಾಂಕ್ ಖಾತೆಗಳಿಗೆ ನೇರವಾಗಿ NEFT/RTGS ವ್ಯವಸ್ಥೆಯ ಮೂಲಕ ಜಮಾ ಮಾಡುವುದು.

ಈ) ಶಿಕ್ಷಣ ಸಂಸ್ಥೆಗಳು ಈ ಶುಲ್ಕಗಳನ್ನು ವಿದ್ಯಾರ್ಥಿಗಳಿಂದ ಪಡೆದಿದ್ದಲ್ಲಿ, ಅದನ್ನು ಸಂಬಂಧಪಟ್ಟ ವಿದ್ಯಾರ್ಥಿಗಳಿಗೆ ಕ್ರಾಸ್ಡ್ ಚೆಕ್ ಮೂಲಕ ಹಿಂತಿರುಗಿಸಿ, ಆ ಚೆಕ್ ನಂಬರ್, ಮೊತ್ತ ಮತ್ತು ಚೆಕ್ ದಿನಾಂಕದ ವಿವರಗಳನ್ನು, ಆಯಾ ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳಿಗೆ ಲಿಖಿತದ ಮೂಲಕ ತಿಳಿಸತಕ್ಕದ್ದು.

ಉ) ಶಾಲಾ–ಕಾಲೇಜುಗಳ ಬ್ಯಾಂಕ್ ಖಾತೆಗೆ, ಹಣ ಜಮಾ ಆಗಿರುವ ಬಗ್ಗೆ ವಿವರಗಳನ್ನು ಬ್ಯಾಂಕಿನಿಂದ ಪಡೆದು, ದಾಖಲೆಗಳನ್ನು ಮಹಾಲೇಖಪಾಲರ ಆಡಿಟ್‌ಗಾಗಿ ಹಾಗೂ ಜಿಲ್ಲಾ ಪಂಚಾಯತ್ ಆಡಿಟ್‌ಗಾಗಿ, ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಯ ಕಛೇರಿಯಲ್ಲಿ ನಿರ್ವಹಿಸಬೇಕು. ಈ ದಾಖಲೆಯ ಒಂದು ಪ್ರತಿಯನ್ನು ಜಿಲ್ಲಾ ಪಂಚಾಯತಿಗೆ ಕಡ್ಡಾಯವಾಗಿ ಸಲ್ಲಿಸಲಾಗುವುದು.

ಊ) ಶುಲ್ಕ ಮರುಪಾವತಿ ವಿಧಾನವನ್ನು ಸಂಪೂರ್ಣವಾಗಿ ಗಣಕೀಕರಿಸಲಾಗುವುದು.

**6. ಶುಲ್ಕ ಮರುಪಾವತಿ ದರಗಳನ್ನು ನಿಗದಿಪಡಿಸುವ ಸಮಿತಿ :**

ರಾಜ್ಯ ಸರ್ಕಾರದ ವಿವಿಧ ಇಲಾಖೆಗಳು ನಿಗದಿಪಡಿಸಿರುವ ಶುಲ್ಕಗಳ ಆಧಾರದ ಮೇಲೆ, ಪ್ರಧಾನ ಕಾರ್ಯದರ್ಶಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿನ ಈ ಕೆಳಗಿನ ಸಮಿತಿಯು, ಪ್ರತಿ ವರ್ಷ ಜೂನ್ ತಿಂಗಳಲ್ಲಿ, ವಿವಿಧ ಕೋರ್ಸುಗಳಿಗೆ ಶುಲ್ಕಗಳನ್ನು ನಿಗದಿಪಡಿಸತಕ್ಕದ್ದು.

| | | |
|---|---|---|
| ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | – | ಅಧ್ಯಕ್ಷರು |
| ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ | – | ಸದಸ್ಯರು |
| ಸರ್ಕಾರದ ಕಾರ್ಯದರ್ಶಿಗಳು (ವೆಚ್ಚ), ಆರ್ಥಿಕ ಇಲಾಖೆ | – | ಸದಸ್ಯರು |
| ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಉನ್ನತ ಶಿಕ್ಷಣ ಇಲಾಖೆ | – | ಸದಸ್ಯರು |
| ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ | – | ಸದಸ್ಯರು |
| ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವೈದ್ಯಕೀಯ ಶಿಕ್ಷಣ ಇಲಾಖೆ | – | ಸದಸ್ಯರು |
| ಎಲ್ಲಾ ವಿಶ್ವವಿದ್ಯಾನಿಲಯಗಳ ಕುಲಸಚಿವರು | – | ಸದಸ್ಯರು |
| ಆಯುಕ್ತರು/ನಿರ್ದೇಶಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | – | ಸದಸ್ಯ ಕಾರ್ಯದರ್ಶಿ |

**7. ಶುಲ್ಕ ಮರುಪಾವತಿಗಾಗಿ ಕೋರ್ಸುಗಳ ವಿಂಗಡಣೆ :**

| | |
|---|---|
| Group-'A' | (i) Degree and Post Graduate level courses including M.Phil., Ph.D. and Post Doctoral research in Medicine (Allopathic, Indian and other recognized systems of medicines), Engineering, Technology, Planning, Architecture, Design, Fashion Technology, Agriculture, Veterinary & Allied Sciences, Management, Business Finance/Administration, Computer Science/Applications. |
| | (ii) Post Graduate Diploma courses including in various branches of management & machine. |
| | (iii) C.A./I.C.W.A./C.S./I.C.F.A. etc., |
| | (iv) M.Phil., Ph.D. and Post Doctoral Programmes (D.Litt., D.Sc., etc) |
| | (v) L.L.M. |
| Group-'B' | (i) Graduate/Post graduate courses leading to Degree, Diploma, Certificate in areas like Pharmacy (B Pharma), Nursing (B Nursing), LLB, BFS, other para-medical branches like rehabilitation, diagnostics etc., Mass Communication, Hotel Management & Catering, Travel/Tourism/Hospitality Management, Interior Decoration, Nutrition & Dietetics, Commercial Art, Financial Services (e.g. Banking, Insurance, Taxation etc.) for which entrance qualification is minimum Sr. Secondary (10+2). |
| | (ii) Post graduate courses not covered under Group I e.g. MA/MSc/M.Com/M.Ed/M.Pharma etc. |
| Group-'C' | (iii) All other courses leading to a graduate degree not covered under Group I e.g. B.A./B.Sc./B.Com. etc., |
| Group-'D' | (iv) All post-matriculation level non-degree courses for which entrance qualification is High School (Class X), e.g. Senior Secondary Certificate (class XI and XII; both general and vocational stream, ITI courses, 3 year diploma courses in Polytechnics, etc., |

ಮೇಲಿನವುಗಳಲ್ಲಿ ಯಾವುದೇ ಕೋರ್ಸು ಬಿಟ್ಟು ಹೋಗಿದ್ದಲ್ಲಿ, ಅಥವಾ ಹೊಸದಾಗಿ ಸೇರ್ಪಡೆಯಾಗಬೇಕಿದ್ದಲ್ಲಿ ಅದನ್ನು ಮೇಲ್ಕಂಡ ಸಮಿತಿಯು ಪರಿಗಣಿಸುತ್ತದೆ.

**8. ತಪ್ಪು ಮಾಹಿತಿಗೆ ದಂಡ :**

ಅರ್ಜಿದಾರರು ಅಥವಾ ಶಿಕ್ಷಣ ಸಂಸ್ಥೆಯು, ತಪ್ಪು ಮಾಹಿತಿ ನೀಡಿದ್ದಲ್ಲಿ, ಅಂತಹವರ ವಿರುದ್ಧ ಈ ಕೆಳಗಿನಂತೆ ಕ್ರಮ ತೆಗೆದುಕೊಳ್ಳಲಾಗುವುದು.

ಅ) ಭಾರತೀಯ ದಂಡ ಸಂಹಿತೆಯ ಕಲಂ 177 ಮತ್ತು 181ರ ಪ್ರಕಾರ, ಶಿಕ್ಷೆಗೆ ಗುರಿಪಡಿಸಲಾಗುತ್ತದೆ.

ಆ) ಕಾನೂನಿನಂತೆ ಕ್ರಮ ಜರುಗಿಸುವುದರ ಜೊತೆಗೆ, ವಿದ್ಯಾರ್ಥಿಯು ಪಡೆದ ಒಟ್ಟು ಶುಲ್ಕವನ್ನು, ಆ ವಿದ್ಯಾರ್ಥಿಯ ತಂದೆ/ತಾಯಿ ಅಥವಾ ಪೋಷಕರಿಂದ, ಭೂ ಕಂದಾಯ ಬಾಕಿಯೆಂದು ವಸೂಲಿ ಮಾಡಲಾಗುವುದು.

ಇ) ನಿಯಮಗಳ ವಿರುದ್ಧ ಮಂಜೂರು ಮಾಡಿ, ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟು ಮಾಡಿದಲ್ಲಿ, ಅಂತಹ ಅಧಿಕಾರಿಗಳ ವಿರುದ್ಧ ಶಿಸ್ತಿನ ಕ್ರಮ ಜರುಗಿಸುವುದಲ್ಲದೆ ಕ್ರಿಮಿನಲ್ ಮೊಕದ್ದಮೆ ಹೂಡಲಾಗುವುದು.

9. **ಇತರೆ :** 1. ಕುಟುಂಬದ ವಾರ್ಷಿಕ ವರಮಾನ, ಸರ್ಕಾರವು ಕಾಲ ಕಾಲಕ್ಕೆ ಹೊರಡಿಸುವ ಆದೇಶಗಳನ್ವಯ ಪರಿಷ್ಕರಣೆಗೆ ಒಳಪಟ್ಟಿರುತ್ತದೆ.

2. ಈ ಯೋಜನೆಯ ಅನುಷ್ಠಾನಕ್ಕೆ ಅಗತ್ಯವಿರುವ ಅರ್ಜಿ ನಮೂನೆ, ಇತ್ಯಾದಿ ವಿಧಾನಗಳನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ನಿರ್ಧರಿಸುವುದು.

10. ಈ ಆದೇಶವು 2012–13ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುತ್ತದೆ.

11. ಈ ಆದೇಶವನ್ನು ಸಚಿವ ಸಂಪುಟದ ಅನುಮೋದನೆಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಜಿ. ಮುಳಕೂರ,**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**PR. 70**

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀಮತಿ ಜಿ. ಮಹದೇವಮ್ಮ, ಕ್ಷೇತ್ರ ಶಿಕ್ಷಣಾಧಿಕಾರಿ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಇಲಾಖಾ ವಿಚಾರಣೆ ನಡೆಸಲು ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** ಅಪರ ನಿಬಂಧಕರು, ವಿಚಾರಣೆಗಳು–11, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಅ.ಸ. ಪತ್ರ No. COMPT/UPLOK/MYS/2125/2012/ARE-11 ದಿನಾಂಕ 09–11–2012.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 09–11–2012ರ ಅರೆ ಸರ್ಕಾರಿ ಪತ್ರದಲ್ಲಿ ಅಪರ ನಿಬಂಧಕರು, ವಿಚಾರಣೆಗಳು–11, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು 1984ರ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ–12(3) ರಡಿ ಮಾನ್ಯ ಉಪ ಲೋಕಾಯುಕ್ತ ರವರು ದಿನಾಂಕ 07–11–2012 ರಂದು ನೀಡಿರುವ ಮೂಲ ವರದಿಯನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕಳುಹಿಸಿರುತ್ತಾರೆ. ಸದರಿ ವರದಿಯಲ್ಲಿ ಆಪಾದಿತರಾದ ಶ್ರೀಮತಿ ಜಿ. ಮಹದೇವಮ್ಮ, ಕ್ಷೇತ್ರ ಶಿಕ್ಷಣಾಧಿಕಾರಿ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ ಇವರು ಫಿರ್ಯಾದಿದಾರ ಶ್ರೀ ಎನ್. ಹನುಮಯ್ಯ, ಉಪ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಪ್ರೌಢ ಶಾಲಾ ವಿಭಾಗ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ, ಇವರಿಂದ 2010–11ನೇ ಸಾಲಿನ ಕಛೇರಿ ನಿರ್ವಹಣಾ ಸಾದಿಲ್ವಾರು ವೆಚ್ಚಕ್ಕಾಗಿ ರೂ. 11,000/– ಗಳನ್ನು ಉಪ ನಿರ್ದೇಶಕರ ಮುಖಾಂತರ ಸರ್ಕಾರದಿಂದ ಮಂಜೂರಾಗಿ ಹಣ ಬಿಡುಗಡೆಯಾದ ಹಣದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಮತಿ ಜಿ. ಮಹದೇವಮ್ಮ ರವರು ರೂ. 2,000/–ಗಳನ್ನು ಲಂಚವಾಗಿ ಕೊಡಬೇಕೆಂದು ಒತ್ತಾಯ ಮಾಡಿರುತ್ತಾರೆ. ಹಾಗೂ ಆಪಾದಿತರು ಹಲವಾರು ಬಾರಿ ಎಲ್ಲಾ ಮುಖ್ಯ ಶಿಕ್ಷಕರುಗಳು ರೂ. 2,000 ಕೊಟ್ಟಿದ್ದು, ನೀವು ಮಾತ್ರ ಕೊಟ್ಟಿಲ್ಲ, ಕೊಡಿ ಎಂದು ಒತ್ತಾಯ ಮಾಡಿರುತ್ತಾರೆ. ಆ ಸಂದರ್ಭದಲ್ಲಿ ಆಪಾದಿತರು ರೂ. 1,000/–ಗಳನ್ನು ಪಡೆದುಕೊಂಡು ಇನ್ನು ಉಳಿದ ರೂ. 1,000/– ಗಳನ್ನು 2–3 ದಿನಗಳಲ್ಲಿ ತಂದು ಕೊಡಲೇಬೇಕೆಂದು ಒತ್ತಾಯಪಡಿಸಿರುತ್ತಾರೆ. ಫಿರ್ಯಾದುದಾರರಿಗೆ ಲಂಚದ ಹಣ ಕೊಡಲು ಇಷ್ಟವಿಲ್ಲದ ಕಾರಣ ದಿನಾಂಕ 26–04–2011 ರಂದು ಮೈಸೂರು ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆಗೆ ಭೇಟಿ ನೀಡಿ ದೂರು ನೀಡಿರುತ್ತಾರೆ.

ಆದರೆ ಫಿರ್ಯಾದಿದಾರರು ಲಂಚವನ್ನು ನೀಡಲು ಮನಸ್ಸಿಲ್ಲದ ಕಾರಣ ಪೊಲೀಸ್ ಇನ್‌ಸ್ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಮೈಸೂರು ಇವರಲ್ಲಿ ದಿನಾಂಕ 07–05–2011 ರಂದು ದೂರನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಕರ್ನಾಟಕ ಲೋಕಾಯುಕ್ತ ಪೊಲೀಸ್, ಮೈಸೂರು ಠಾಣೆಯಲ್ಲಿ 05/2011 ರಲ್ಲಿ ಲಂಚ ಪ್ರತಿಬಂಧಕ ಕಾಯ್ದೆ 1988ರ ಕಲಂ–7, 13(1)(ಡಿ) ಜೊತೆಯಲ್ಲಿ 13(2)ರ ಅಡಿಯಲ್ಲಿ ಫಿರ್ಯಾದನ್ನು ಸ್ವೀಕರಿಸಿ ಕೇಸನ್ನು ದಾಖಲು ಮಾಡಿ ತನಿಖೆ ಕೈಗೊಂಡಿರುತ್ತಾರೆ.

ಫಿರ್ಯಾದಿದಾರ ಶ್ರೀ ಎನ್. ಹನುಮಯ್ಯ ಇವರಿಂದ ಆಪಾದಿತರಾದ ಶ್ರೀಮತಿ ಜಿ. ಮಹದೇವಮ್ಮ ಅವರು ಸ್ವಂತಕ್ಕೆ ರೂ. 1000/–ಗಳನ್ನು ಲಂಚದ ಹಣ ನೀಡುವಂತೆ ಕೇಳಿ ಅಂದೇ ದಿನಾಂಕ 07–05–2011 ರಂದು ಸಂಜೆ 6–05 ಗಂಟೆಯ ಸುಮಾರಿಗೆ ಟಿ. ನರಸೀಪುರ ತಾಲ್ಲೂಕು, ಬಿ.ಇ.ಓ. ಕಛೇರಿಯಲ್ಲಿ, ನೆರಳು ಸಾಕ್ಷಿ ಪಂಚ ನಂ. 2 ಶ್ರೀ ಎಂ.ಎನ್. ರಾಜಶೇಖರ ಮೂರ್ತಿ ಇವರು ನೋಡುತ್ತಿದ್ದಂತೆ ಫಿರ್ಯಾದಿದಾರ ಶ್ರೀ ಹನುಮಯ್ಯ ಇವರಿಂದ ಲಂಚದ ಹಣ ರೂ. 1000/–ಗಳನ್ನು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಸದರಿ ಅಕ್ರಮ ಸಂಭಾವನೆಯಾದ ರೂ. 1000/–ಗಳನ್ನು ಆಪಾದಿತರಿಂದ ವಶಪಡಿಸಿಕೊಳ್ಳಲಾಗಿದೆ. ಹಾಗೂ ತನಿಖಾಧಿಕಾರಿಗಳಿಗೆ ಸದರಿ ಹಣವು ಅಕ್ರಮ ಹಣವಲ್ಲವೆಂದು ಪುರಾವೆ ಒದಗಿಸಲು ಆಪಾದಿತರು ವಿಫಲರಾಗಿರುತ್ತಾರೆ.

ಮೇಲಿನ ಆಪಾದಿತರು ಫಿರ್ಯಾದುದಾರನಿಂದ ದಿನಾಂಕ 07–05–2011 ರಂದು ಅಕ್ರಮ ಸಂಭಾವನೆಯನ್ನು ಪಡೆಯುತ್ತಿದ್ದಾಗ ಕರ್ನಾಟಕ ಲೋಕಾಯುಕ್ತ ಪೊಲೀಸ್, ಮೈಸೂರುರವರು ಬೀಸಿದ ಬಲೆಗೆ ಸಿಕ್ಕಿಬಿದ್ದಿದ್ದಾರೆ ಎಂಬ ಆರೋಪವು ತನಿಖೆಯಿಂದ, ಸಾಕ್ಷ್ಯಾಧಾರಗಳಿಂದ ಹಾಗೂ ರಾಸಾಯನಿಕ ಪರೀಕ್ಷೆಯಿಂದ ಮೇಲು ನೋಟಕ್ಕೆ ಸಾಬೀತು ಆಗಿರುವುದರಿಂದ ಆರೋಪಿತರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು 1966ರ ನಿಯಮ 3(1)ರ ಪ್ರಕಾರ ದುರ್ನಡತೆ ಎಸಗಿದ್ದಾರೆ. ಅವರ ವಿರುದ್ಧ ಶಿಸ್ತುಕ್ರಮ ಕೈಗೊಳ್ಳುವಂತೆ ಮತ್ತು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ)ರ ಅನ್ವಯ ವಿಚಾರಣೆ ನಡೆಸಲು ಪ್ರಕರಣವನ್ನು ಸಕ್ಷಮ ಪ್ರಾಧಿಕಾರಕ್ಕೆ ವಹಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲು ತೀರ್ಮಾನಿಸಿ ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 19 ಡಿಜಿಓ 2011, ಬೆಂಗಳೂರು, ದಿನಾಂಕ : 04ನೇ ಜನವರಿ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀಮತಿ ಜಿ. ಮಹದೇವಮ್ಮ, ಕ್ಷೇತ್ರ ಶಿಕ್ಷಣಾಧಿಕಾರಿ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ ಇವರ ವಿರುದ್ಧ ದಾಖಲಾದ ಲಂಚ ವಿರೋಧಿ ಪ್ರಕರಣದಲ್ಲಿ ಇಲಾಖಾ ವಿಚಾರಣೆ ನಡೆಸಲು ಈ ಪ್ರಕರಣವನ್ನು ಕರ್ನಾಟಕ

ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ)ರ ರನ್ವಯ ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ ಇವರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಶ್ರೀಪಾದು. ಹೆಚ್.ಎನ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸಮಿತಿಗಳು).

**PR. 71**

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ:** ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ ಇವರ ನಿವಾಸದ ಸ್ವಂತ ದೂರವಾಣಿಯನ್ನು ತಾತ್ಕಾಲಿಕವಾಗಿ ಅಧಿಕೃತ ದೂರವಾಣಿ ಎಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಭಾನಿ 01/ ಜಿಪಿಎ/ನಿದೂಬ/2012, ದಿನಾಂಕ 26-06-2012.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಭಾಷಾಂತರ ಇಲಾಖೆ ಇವರು ಸಚಿವಾಲಯದ ಉಪ ಕಾರ್ಯದರ್ಶಿ ವೃಂದಕ್ಕೆ ಸೇರಿದ್ದು, ಪ್ರಸ್ತುತ ನಿಯೋಜನೆ ಮೇಲೆ ಭಾಷಾಂತರ ಇಲಾಖೆಯ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ನಿರ್ದೇಶಕರ ನಿವಾಸಕ್ಕೆ ಗುರುತಿಸಲಾದ ಸ್ಥಿರ ಸರ್ಕಾರಿ ದೂರವಾಣಿಯನ್ನು, safe Custody ಯಲ್ಲಿ ಇಡಲಾಗಿದೆ. ಇದನ್ನು safe Custody ಯಿಂದ ತೆಗೆದು ಪ್ರಸ್ತುತ ನಿರ್ದೇಶಕರಾದ ಶ್ರೀ ವಾಸುದೇವಮೂರ್ತಿರವರ ನಿವಾಸಕ್ಕೆ ಅಳವಡಿಸಬೇಕಾಗುತ್ತದೆ ಹಾಗೂ ಇದೊಂದು ತಾತ್ಕಾಲಿಕ ವ್ಯವಸ್ಥೆಯಾಗಿರುವುದರಿಂದ, ಇದರ ಬದಲು ಪ್ರಸ್ತುತ ನಿರ್ದೇಶಕರ ನಿವಾಸದಲ್ಲಿನ ಸ್ವಂತ ದೂರವಾಣಿ ಸಂಖ್ಯೆ 26650737 ನ್ನು ದಿನಾಂಕ 07-03-2012 ರಿಂದ ಜಾರಿಗೆ ಬರುವಂತೆ ತಾತ್ಕಾಲಿಕವಾಗಿ ನಿರ್ದೇಶಕರ ಅಧಿಕೃತ ಸರ್ಕಾರಿ ದೂರವಾಣಿ ಎಂದು ಪರಿಗಣಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ.

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು (ಸೇವೆಗಳು-ಎಫ್) ಈ ವಿಷಯದಲ್ಲಿ ಸಂಬಂಧಪಟ್ಟ ಆಡಳಿತ ಇಲಾಖೆಯೇ ಕ್ರಮ ಜರುಗಿಸುವಂತೆ ತಿಳಿಸಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಂವ್ಯಶಾಇ 34 ಭಾನಿವಿ 2012, ಬೆಂಗಳೂರು, ದಿನಾಂಕ : 25-08-2012**

ಶ್ರೀ ವಾಸುದೇವಮೂರ್ತಿ, ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ ಇವರ ನಿವಾಸದ ಸ್ವಂತ ದೂರವಾಣಿ ಸಂಖ್ಯೆ 26650737 ನ್ನು ದಿನಾಂಕ 07-03-2012 ರಿಂದ ಜಾರಿಗೆ ಬರುವಂತೆ ನಿರ್ದೇಶಕರ ಅಧಿಕೃತ ಸರ್ಕಾರಿ ದೂರವಾಣಿ ಎಂದು ಪರಿಗಣಿಸಿ ಆದೇಶಿಸಿದೆ.

ಸದರಿ ಸ್ಥಿರ ದೂರವಾಣಿ ಬಿಲ್ಲನ್ನು ಸ್ವತಃ ಅಧಿಕಾರಿಯವರೇ ಪಾವತಿಸಿ, ನಂತರ ಮರುಪಾವತಿಗಾಗಿ ಭಾಷಾಂತರ ನಿರ್ದೇಶನಾಲಯಕ್ಕೆ ಸಲ್ಲಿಸುವಂತೆ ಮತ್ತು ಈಗ ಸೇಪ್ ಕಸ್ಟಡಿಯಲ್ಲಿರಿಸಿರುವ ದೂರವಾಣಿಯನ್ನು ಸರೆಂಡರ್ ಮಾಡಲು ಸಹ ಆದೇಶಿಸಿದೆ.

ಸದರಿ ವೆಚ್ಚವನ್ನು ಲೆಕ್ಕಶೀರ್ಷಿಕೆ 2052-00-092-05 ರ ಅಡಿಯಲ್ಲಿ ಒದಗಿಸಲಾದ ವೆಚ್ಚದಲ್ಲಿ ಭರಿಸುವಂತೆ ಸಹ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ. ಶ್ರೀಧರ್,**
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**PR. 72**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಚಿತ್ರದುರ್ಗ ಕುಶಲಕರ್ಮಿ ತರಬೇತಿ ಸಂಸ್ಥೆಯ ಕಟ್ಟಡವನ್ನು ಉದ್ಯೋಗ ಮತ್ತು ತರಬೇತಿ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಹಾಗೂ ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿ, ಚಿತ್ರದುರ್ಗ, ರವರ ಅ.ಸ. ಪತ್ರದ ಸಂಖ್ಯೆ : ಕಾಇ/52/ಕಾ/2012, ದಿನಾಂಕ 18-05-2012.
2. ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ರವರ ಪತ್ರ ಸಂಖ್ಯೆ : ಸಂಕಿರ್ಣ/ಸಿಆರ್/12-13, ದಿನಾಂಕ 14-06-2012.
3. ಅಪರ ನಿರ್ದೇಶಕರು (ಜಿಕೈಕೇ), ಕೈ ಮತ್ತು ವಾ ಇಲಾಖೆ, ಬೆಂಗಳೂರು ರವರ ಪತ್ರ ಸಂ : ಜಿಕೈಕೇ/ಸಿ2/ಮಾಹ/2012-13, ದಿನಾಂಕ 10-8-2012 ಮತ್ತು 9-10-2012.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಅ.ಸ. ಪತ್ರದಲ್ಲಿ ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಹಾಗೂ ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿ, ಚಿತ್ರದುರ್ಗ, ಇವರು ಚಿತ್ರದುರ್ಗ ಜಿಲ್ಲೆಯಲ್ಲಿರುವ ಕುಶಲಕರ್ಮಿ ತರಬೇತಿ ಸಂಸ್ಥೆಯಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಮಾನವ ಸಂಪನ್ಮೂಲ ಕೇಂದ್ರವನ್ನಾಗಿ ಪರಿವರ್ತಿಸಲು ಉದ್ಯೋಗ ಮತ್ತು ತರಬೇತಿ ಇಲಾಖೆಗೆ ಹಸ್ತಾಂತರಿಸಲು ವಿನಂತಿಸಿದ್ದಾರೆ. ರಾಜ್ಯ ಸರ್ಕಾರವು ಹಾಲಿ ಇರುವ ಉದ್ಯೋಗ ವಿನಿಮಯ ಕೇಂದ್ರಗಳನ್ನು ಮಾನವ ಸಂಪನ್ಮೂಲ ಅಭಿವೃದ್ಧಿ ಕೇಂದ್ರಗಳನ್ನಾಗಿ ಪರಿವರ್ತಿಸಲು ಕ್ರಮ ಕೈಗೊಂಡಿದ್ದು, ಚಿತ್ರದುರ್ಗ ಜಿಲ್ಲೆಯಲ್ಲಿ ಉದ್ಯೋಗ

ವಿನಿಮಯ ಕೇಂದ್ರಕ್ಕೆ ಸ್ವಂತ ಕಟ್ಟಡ ಇಲ್ಲದೇ ಬಾಡಿಗೆ ಕಟ್ಟಡದಲ್ಲಿ ಕೆಲಸ ನಿರ್ವಹಿಸುತ್ತಿರುವುದರಿಂದ ಚಿತ್ರದುರ್ಗ ಜಿಲ್ಲೆಯಲ್ಲಿರುವ ಕುಶಲ ಕರ್ಮಿ ತರಬೇತಿ ಸಂಸ್ಥೆಯ ಕಡ್ಡಡವನ್ನು ಮಾನವ ಸಂಪನ್ಮೂಲ ಅಭಿವೃದ್ಧಿ ಕೇಂದ್ರವನ್ನಾಗಿ ಪರಿವರ್ತಿಸುವ ಉದ್ದೇಶಕ್ಕೆ ಉದ್ಯೋಗ ಮತ್ತು ತರಬೇತಿ ಇಲಾಖೆಗೆ ಹಸ್ತಾಂತರಿಸುವಂತೆ ಕೋರಿದ್ದಾರೆ.

ಮೇಲೆ ಓದಲಾದ (2) ರ ಪತ್ರದಲ್ಲಿ, ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ರವರು ಕುಶಲಕರ್ಮಿ ತರಬೇತಿ ಸಂಸ್ಥೆಯ ಕಟ್ಟಡವು ನಗರದ ಮಧ್ಯಭಾಗದಲ್ಲಿದ್ದು, ಮಾನವ ಸಂಪನ್ಮೂಲ ಕೇಂದ್ರ ನಡೆಸಲು ಸೂಕ್ತವಾಗಿರುವುದರಿಂದ, ಸದರಿ ಕಟ್ಟಡವನ್ನು ಜಿಲ್ಲಾ ಉದ್ಯೋಗಾಧಿಕಾರಿ, ಉದ್ಯೋಗ ಮತ್ತು ತರಬೇತಿ ಇಲಾಖೆ, ಚಿತ್ರದುರ್ಗ ಇವರಿಗೆ ಹಸ್ತಾಂತರ ಮಾಡಲು ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (3)ರ ಪತ್ರಗಳಲ್ಲಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ವಶದಲ್ಲಿರುವ ಚಿತ್ರದುರ್ಗ ಜಿಲ್ಲೆಯ ಕುಶಲಕರ್ಮಿ ತರಬೇತಿ ಸಂಸ್ಥೆಯ ಆವರಣದಲ್ಲಿರುವ ಒಟ್ಟಾರೆ ವಿಸ್ತೀರ್ಣ (ಕಟ್ಟಡ ಮತ್ತು ಖಾಲಿ ಜಾಗ)/ 260+267/2x175+51/2 ಅಡಿಗಳ ಪೈಕಿ 8809 ಚದರ ಅಡಿ ಕಟ್ಟಡವನ್ನು ಮತ್ತು 5049 ಖಾಲಿ ಜಾಗವನ್ನು ಮಾನವ ಸಂಪನ್ಮೂಲ ಅಭಿವೃದ್ಧಿ ಕೇಂದ್ರವನ್ನಾಗಿ ಪರಿವರ್ತಿಸಲು ಉದ್ಯೋಗ ಮತ್ತು ತರಬೇತಿ ಇಲಾಖೆಗೆ ಹಸ್ತಾಂತರಿಸಿ ಸರ್ಕಾರಿ ಆದೇಶ ಹೊರಡಿಸಲು ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಾಕೈ 08 ಕೈಯೋವಿ 2012, ಬೆಂಗಳೂರು, ದಿನಾಂಕ : 07–11–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ವಶದಲ್ಲಿರುವ ಚಿತ್ರದುರ್ಗ ನಗರದ ಖಾತೆ ಸಂಖ್ಯೆ 7700/6467 ರಲ್ಲಿರುವ ಚಿತ್ರದುರ್ಗ ಜಿಲ್ಲೆಯ ಕುಶಲಕರ್ಮಿ ತರಬೇತಿ ಸಂಸ್ಥೆಯ ಆವರಣದಲ್ಲಿರುವ ಒಟ್ಟಾರೆ ವಿಸ್ತೀರ್ಣ (ಕಟ್ಟಡ ಮತ್ತು ಖಾಲಿ ಜಾಗ)/ 260+267/2x175+51/2 ಅಡಿಗಳ ಪೈಕಿ 8809 ಚದರ ಅಡಿ ಕಟ್ಟಡವನ್ನು ಮತ್ತು 5049 ಖಾಲಿ ಜಾಗವನ್ನು ಮಾನವ ಸಂಪನ್ಮೂಲ ಅಭಿವೃದ್ಧಿ ಕೇಂದ್ರವನ್ನಾಗಿ ಪರಿವರ್ತಿಸಲು ಉದ್ಯೋಗ ಮತ್ತು ತರಬೇತಿ ಇಲಾಖೆಗೆ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಹಸ್ತಾಂತರಿಸಿ ಆದೇಶಿಸಿದೆ.

- ಕಟ್ಟಡ ಮತ್ತು ಖಾಲಿ ಜಾಗವನ್ನು ಯಾವ ಉದ್ದೇಶಕ್ಕಾಗಿ ಹಸ್ತಾಂತರಿಸಲಾಗುವುದೋ ಅದೇ ಉದ್ದೇಶಕ್ಕಾಗಿ ಮಾತ್ರ ಉಪಯೋಗಿಸುವುದು.
- ಕಟ್ಟಡವನ್ನು ಸುಸ್ಥಿತಿಯಲ್ಲಿ ಇರಿಸುವುದು.
- ಸದರಿ ಕಟ್ಟಡವನ್ನು ಬೇರೆ ಉದ್ದೇಶಕ್ಕೆ ಹಸ್ತಾಂತರಿಸುವಂತಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ರೇಣುಕಾರಾಧ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ. (ಸೇವೆಗಳು)

**PR. 73**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಯೋಗಾನಂದ, ಮಾಜಿ ಪಿ.ಸಿ. 9682, ಆರ್.ಟಿ. ನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು, ಉತ್ತರ ವಿಭಾಗ, ಬೆಂಗಳೂರು, ಇವರ ಆದೇಶ ಸಂಖ್ಯೆ: 16/ಡಿಇಆರ್–6/ಡಿಸಿಪಿ/ಉ/2009, ದಿನಾಂಕ: 20–06–2011
2. ಮೇಲ್ಮನವಿ ಪ್ರಾಧಿಕಾರ ಹಾಗೂ ಅಡಿಷನಲ್ ಪೊಲೀಸ್ ಆಯುಕ್ತರು, ಆಡಳಿತ, ಬೆಂಗಳೂರು, ಇವರ ಆದೇಶ ಸಂಖ್ಯೆ: 24/ಅಪೀಲು–1/2011, ದಿನಾಂಕ: 11–01–2012
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 25–04–2012
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)11/2012–13, ದಿನಾಂಕ: 07–07–2012

**ಪ್ರಸ್ತಾವನೆ:**

ಶ್ರೀ ಯೋಗಾನಂದ, ಇವರು ಬೆಂಗಳೂರಿನ ರಾಜಾಜಿನಗರ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕ್ರಿಮಿನಲ್ ಪ್ರಕರಣದಲ್ಲಿ ಆರೋಪಿಯಾಗಿ ಹಾಗೂ ಅನಧಿಕೃತವಾಗಿ ಗೈರು ಹಾಜರಾಗಿ ಕರ್ತವ್ಯದಲ್ಲಿ ತೀವ್ರ ತರಹದ ಅಶಿಸ್ತು ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಪಿ.ಸಿ.–9682 ಶ್ರೀ ಯೋಗಾನಂದ, ರಾಜಾಜಿನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಆದ ನೀವು

1. ದಿನಾಂಕ: 05–05–09ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತೀರಿ.
2. ನೀವು ಬೆಂಗಳೂರು ನಗರ ರಾಜಗೋಪಾಲನಗರ ಪೊಲೀಸ್ ಠಾಣೆಯ ಮೊ.ಸಂ. 296/09 ಕಲಂ 498/(ಎ) ಜೊತೆ 34 ಐಪಿಸಿ ಹಾಗೂ 3 & 4 ಡಿ.ಪಿ. ಆಕ್ಟ್ ಪ್ರಕರಣದಲ್ಲಿ ಆರೋಪಿಯಾಗಿರುತ್ತೀರಿ.
3. ಬೆಂಗಳೂರು ಗ್ರಾಮಾಂತರ ಜಿಲ್ಲೆ ತಾವರೆಕೆರೆ ಪೊಲೀಸ್ ಠಾಣೆ ಮೊ.ಸಂ. 363/09 ಕಲಂ 304(ಬಿ) ಐಪಿಸಿ ಮತ್ತು 3 & 4 ಡಿಪಿ ಆಕ್ಟ್ ಪ್ರಕರಣದಲ್ಲಿ ಆರೋಪಿಯಾಗಿರುತ್ತೀರಿ."

ನೀವು ದಿನಾಂಕ: 05–05–2009ರಿಂದ ಅನಧಿಕೃತವಾಗಿ ಗೈರುಹಾಜರಿಯಲ್ಲಿ ಮುಂದುವರೆದಿರುತ್ತೀರಿ. ಅಲ್ಲದೆ ನೀವು ಶಿಸ್ತು ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಹೇಳದೆ ಕೇಳದೆ, ಎಂ.ಹೆಚ್.ಎಸ್. ಪಡೆಯದೆ ಅಥವಾ ಹಿರಿಯ ಅಧಿಕಾರಿಗಳ ಅನುಮತಿಯನ್ನು ಪಡೆಯದೆ ರಜೆಯನ್ನು ಮಂಜೂರು ಮಾಡಿಸಿಕೊಳ್ಳದೆ ಕರ್ತವ್ಯಕ್ಕೆ ಅನಧಿಕೃತವಾಗಿ ದೀರ್ಘಾವಧಿಯಿಂದ ಗೈರು ಹಾಜರಿಯಲ್ಲಿ ಮುಂದುವರೆದಿರುತ್ತೀರಿ, ಅಲ್ಲದೆ ರಾಜಗೋಪಾಲನಗರ ಪೊಲೀಸ್ ಠಾಣೆ ಮತ್ತು ತಾವರೆಕೆರೆ ಪೊಲೀಸ್ ಠಾಣೆಯಲ್ಲಿ ಮೇಲ್ಕಂಡ ಕ್ರಿಮಿನಲ್ ಪ್ರಕರಣಗಳಲ್ಲಿ ಆರೋಪಿಯಾಗಿರುತ್ತೀರಿ, ನೀವು ಇಲಾಖೆಗೆ ಅಗೌರವ ತರುವಂತಹ ಕೃತ್ಯಗಳಲ್ಲಿ ಭಾಗಿಯಾಗಿ ನಿಮ್ಮ ಕರ್ತವ್ಯದಲ್ಲಿ ತೀವ್ರತರವಾದ ಅಶಿಸ್ತು, ದುರ್ನಡತೆ ಹಾಗೂ ಸರ್ಕಾರಿ ನೌಕರಿಗೆ ಸಲ್ಲದಂತಹ ವರ್ತನೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ, ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು, ಉತ್ತರ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 20–06–2011ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ ದಿನಾಂಕ: 15–05–09 ರಿಂದ 11–10–2009ರ ವರೆಗೆ ಒಟ್ಟು 150 ದಿನಗಳ ಗೈರುಹಾಜರಿಯನ್ನು ಸಂಬಳರಹಿತ ರಜೆ ಎಂದು ಹಾಗೂ ದಿನಾಂಕ: 12–10–09 ರಿಂದ 12–08–2010ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಆಯುಕ್ತರು, ಆಡಳಿತ, ಬೆಂಗಳೂರು, ಇವರು ಮೇಲೆ ಕ್ರಮಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 11–01–2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕ್ರಿಮಿನಲ್ ಪ್ರಕರಣದಲ್ಲಿ ಆರೋಪಿಯಾಗಿ ಹಾಗೂ ಅನಧಿಕೃತವಾಗಿ ಗೈರು ಹಾಜರಾಗಿ ಕರ್ತವ್ಯದಲ್ಲಿ ತೀವ್ರ ತರಹದ ಅಶಿಸ್ತು ದುರ್ನಡತೆ ಪ್ರದರ್ಶಿಸುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 43 ಪೊಸಿಅ 2012, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಯೋಗಾನಂದ, ಮಾಜಿ ಪಿ.ಸಿ. 9682, ಆರ್.ಟಿ. ನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು)

**PR. 108**

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ವಿಜಯನಾಮ ಮರಲಿಂಗಪ್ಪ ಚೌರ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ

**ಸರ್ಕಾರದ ಆದೇಶ ಸಂಖ್ಯೆ: ಆಇ 376 ರಾಲೆಪ 2012, ಬೆಂಗಳೂರು ದಿನಾಂಕ: 10ನೇ ಜನವರಿ, 2013**

ಶ್ರೀ ವಿಜಯನಾಮ ಮರಲಿಂಗಪ್ಪ ಚೌರ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಇವರು ತಮ್ಮ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವರೆಂದು ತಿಳಿದು ಬಂದ ವಿಶ್ವಾಸಾರ್ಹ ಮಾಹಿತಿ ಅನ್ವಯ ಸದರಿಯವರ ವಿರುದ್ಧ ಕರ್ನಾಟಕ ಲೋಕಾಯುಕ್ತ, ಬಿಜಾಪುರ ರವರು ದಿನಾಂಕ: 07–11–2012ರಂದು ಲಂಚ ನಿರೋಧ ಕಾಯ್ದೆ 1988ರ ಪ್ರಕಾರ ಮೊಕದ್ದಮೆ ಸಂಖ್ಯೆ: 20/2012ರಲ್ಲಿ ಪ್ರಕರಣವನ್ನು ದಾಖಲು ಮಾಡಿಕೊಂಡು ದಿನಾಂಕ: 08–11–2012 ಮತ್ತು ದಿನಾಂಕ: 09–11–2012ರಂದು ತನಿಖಾಧಿಕಾರಿಯವರು ಮತ್ತು ಸಹ ತನಿಖಾಧಿಕಾರಿಯವರು ಆಪಾದಿತರಿಗೆ ಸಂಬಂಧಿಸಿದ ಈ ಕೆಳಕಾಣಿಸಿದ ಸ್ಥಳಗಳ ಮೇಲೆ ದಾಳಿ ನಡೆಸಿ ಹಲವಾರು ಸ್ಥಿರಾಸ್ತಿ–ಚರಾಸ್ತಿಗಳು ಮತ್ತು ಸಂಬಂಧಿಸಿದ ದಾಖಲೆಗಳನ್ನು ವಶಪಡಿಸಿಕೊಂಡಿರುವುದರಿಂದಲೂ,

1. ಮನೆ ನಂ. 74, ಮಂಗಳಗಿರಿ ನಿವಾಸ, ಗ್ಯಾಂಗಬಾವಡಿ ಕಾಲೋನಿ, ಮಹಲ ಬಾಗಾಯತ್ ರಿ.ಸ.ನಂ. 899/1ಡ, ಬಿಜಾಪುರ
2. ಆಪಾದಿತರು ಕಾರ್ಯನಿರ್ವಹಿಸುವ ಜಿಲ್ಲಾ ಪಂಚಾಯತ್, ಬಿಜಾಪುರ ಕಛೇರಿಯಲ್ಲಿರುವ ಮುಖ್ಯಾಧಿಕಾರಿಗಳ ಕೊಠಡಿ
3. ಆಪಾದಿತರಿಗೆ ಸಂಬಂಧಿಸಿದ ಅಲಿಯಾಬಾದ ಬ್ಯಾಂಕ್, ಬಿಜಾಪುರದಲ್ಲಿರುವ ಲಾಕರ್
4. ಆಪಾದಿತರ ಮಗ ಡಾ॥ ಗಿರೀಶ ವ್ಹಿ. ಚೌರ ಇವರು ವಾಸ್ತವ್ಯ ಇರುವ ಡಾ॥ ಪಿ.ಎಂ. ನಾಡಗೌಡ ಡೆಂಟಲ್ ಕಾಲೇಜು ವಸತಿ ನಿಲಯ, ಬಾಗಲಕೋಟೆ
5. ಆಪಾದಿತರು ಮತ್ತು ಅವರ ಕುಟುಂಬ ವರ್ಗದವರ ಹೆಸರಿನಲ್ಲಿರುವ ಅಲಿಯಾಬಾದ ಗ್ರಾಮ ತೋಟದ ಮನೆ ಹಾಗೂ ಜಮೀನುಗಳು

ಮೇಲ್ಕಾಣಿಸಿದ ಸ್ಥಳಗಳ ದಾಳಿ ಕಾಲದಲ್ಲಿ ಪರಿಶೀಲನೆಯಿಂದ ಗೃಹಪಯೋಗ ವಸ್ತುಗಳು, ಚಿನ್ನ, ಬೆಳ್ಳಿ, ನಗದು ಹಣ, ಚರ ಮತ್ತು ಸ್ಥಿರಾಸ್ತಿಗಳಿಗೆ ಸಂಬಂಧಿಸಿದ ದಾಖಲಾತಿಗಳು ಕಂಡು ಬಂದಿದ್ದು, ಇದುವರೆಗಿನ ಪ್ರಾಥಮಿಕ ತನಿಖೆಯಿಂದ ಆಪಾದಿತರಾದ ಶ್ರೀ ವಿಜಯನಾಮ ಮರಲಿಂಗಪ್ಪ ಚೌರ, ಜಂಟಿ ನಿಯಂತ್ರಕರು ರಾಜ್ಯ ಲೆಕ್ಕಪತ್ರ ಇಲಾಖೆ, ಇವರು ಅಕ್ರಮ ಆಸ್ತಿಯನ್ನು ತಮ್ಮ ಬಲ್ಲ ಮೂಲದ ಆದಾಯಕ್ಕಿಂತಲೂ ಮೀರಿ ಸಂಪಾದಿಸಿರುವುದು ಹಾಗೂ ಅಪರಾಧಿಕ ದುರ್ನಡತೆ ಎಸಗಿರುವುದು ಕಂಡು ಬಂದಿದ್ದು ಇದರಿಂದ ಆಪಾದಿತರು ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವೆಸಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ತಿಳಿದು ಬಂದಿರುವುದರಿಂದಲೂ,

ಸರ್ಕಾರದಲ್ಲಿ ಲಭ್ಯವಿರುವ ಇವರ ಸ್ಥಿರಾಸ್ತಿ-ಚರಾಸ್ತಿ ಪಟ್ಟಿಯನ್ನು ಪರಿಶೀಲಿಸಲಾಗಿ ಲೋಕಾಯುಕ್ತ ಪೊಲೀಸರು ಪತ್ತೆ ಮಾಡಿದ ಆಸ್ತಿಗಳ ಪೈಕಿ ಹಲವಾರು ಆಸ್ತಿಗಳನ್ನು ಖರೀದಿಸಿರುವುದಕ್ಕೆ ಸರ್ಕಾರದ ಪೂರ್ವಾನುಮತಿ ಪಡೆಯದೇ ಇರುವುದು ಹಾಗೂ ಮಾಹಿತಿ ನೀಡದೇ ಇರುವುದು ಕಂಡು ಬಂದಿರುವುದರಿಂದಲೂ,

ಮೇಲಿನ ಕಾರಣಗಳಿಂದಾಗಿ ಇವರ ವಿರುದ್ಧ ಲೋಕಾಯುಕ್ತ ಪೊಲೀಸರ ತನಿಖೆ ಮುಂದುವರೆದಿದ್ದು ಈ ಕಾರಣಗಳಿಂದಾಗಿ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಬೇಕೆಂದು ಸರ್ಕಾರವು ಭಾವಿಸುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)(ಎಎ)ದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ವಿಜಯನಾಮ ಮರಲಿಂಗಪ್ಪ ಚೌರ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಇವರನ್ನು ಇವರ ವಿರುದ್ಧ ಶಿಸ್ತು ಕ್ರಮ/ಕ್ರಿಮಿನಲ್ ಮೊಕದ್ದಮೆಯನ್ನು ಕಾಯ್ದಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ವಿಜಯನಾಮ ಮರಲಿಂಗಪ್ಪ ಚೌರ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಅವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು ನಿಯಮ 98ರನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ವಿಜಯನಾಮ ಮರಲಿಂಗಪ್ಪ ಚೌರ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಅವರು ಸಕ್ಷಮ ಪ್ರಾಧಿಕಾರ ಅನುಮೋದನೆ ಪಡೆಯದೆ ಕೇಂದ್ರ ಸ್ಥಾನವನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್,**
ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ),
ಆರ್ಥಿಕ ಇಲಾಖೆ

PR. 87

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಶಿವಣ್ಣ, ಸಹಾಯಕ ನಿರ್ದೇಶಕರು, (ಸ್ವತಂತ್ರ ಪ್ರಭಾರ) ಜಿಲ್ಲಾ ಕೈಗಾರಿಕಾ ಕೇಂದ್ರ, ಮಂಡ್ಯ (ಪ್ರಸ್ತುತ ಜಿಲ್ಲಾ ಕೈಗಾರಿಕಾ ಕೇಂದ್ರ, ಕೋಲಾರ) ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣ ವಿಚಾರಣೆಯನ್ನು ನಡೆಸಲು ಮಾನ್ಯ ಉಪ ಲೋಕಾಯುಕ್ತರವರಿಗೆ ವಹಿಸುವ ಬಗ್ಗೆ

**ಓದಲಾಗಿದೆ :**

1. ಉಪ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಲ್-14/ಸಿಆರ್-05/2011, ಮಂಡ್ಯ, ದಿನಾಂಕ: 17-03-2011
2. ಪತ್ರ ಸಂಖ್ಯೆ: ಆಡಳಿತ/ಸಿಬ್ಬಂದಿ ಇ4/03/2011-11,, ದಿನಾಂಕ: 07/08-04-2011
3. ಸರ್ಕಾರಿ ಆದೇಶ ಸಂಖ್ಯೆ: ವಾಕೈ 53 ಕೈಸೇವಿ 2011, ದಿನಾಂಕ: 30-05-2011 ಮತ್ತು 31-03-2012
4. ಪತ್ರ ಸಂಖ್ಯೆ: ಆಡಳಿತ/ಸಿಬ್ಬಂದಿ/ಇ4/03/2011-12, ದಿನಾಂಕ: 04/08-11-2011
5. ಅಪರ ಪೊಲೀಸ್ ಮಹಾ ನಿರ್ದೇಶಕರು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಮ್-14/ಸಿಆರ್-05/2011, ಮಂಡ್ಯ, ದಿನಾಂಕ: 31-01-2012
6. ಅಪರ ನಿಬಂಧಕರು ವಿಚಾರಣೆಗಳು-11 ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ: Compt/Uplok/MYS/2371/2012 ARE-11. Dated: 06-11-2012

**ಪ್ರಸ್ತಾವನೆ:**

ಶ್ರೀ ಶಿವಣ್ಣ, ಸಹಾಯಕ ನಿರ್ದೇಶಕರು, (ಸ್ವತಂತ್ರ ಪ್ರಭಾರ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ, ಇವರು ಶ್ರೀ ಬಿ.ಪಿ. ಸುಂದರಮೂರ್ತಿ, ಮರಗೆಲಸ, ಹೊಸ ಬೂದನೂರು ಗ್ರಾಮ, ಇವರು ಮಂಡ್ಯ ಇವರಿಂದ ರೂ5,000/-ಗಳ ಲಂಚ ನೀಡಬೇಕೆಂದು ಒತ್ತಾಯಿಸಿದ್ದು, ಸದರಿಯವರ ವಿರುದ್ಧ ಮೊ.ನಂ. 05/2011ರ ಪ್ರಕರಣ ದಾಖಲಿಸಿ ತನಿಖೆ ಕೈಗೊಂಡು ದಿನಾಂಕ: 07-03-2011ರಂದು ಬೀಸಿದ ಬಲೆಯು ಯಶಸ್ವಿಯಾಗಿದ್ದು, ಸದರಿ ಅಧಿಕಾರಿಯವರ ಮೇಲಿನ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾದ ಹಿನ್ನೆಲೆಯಲ್ಲಿ ಇವರನ್ನು ಮೇಲೆ ಓದಲಾದ (3)ರ ದಿನಾಂಕ: 30-05-2012ರ ಆದೇಶದಲ್ಲಿ ಅಮಾನತ್ತುಗೊಳಿಸಿ ತದನಂತರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಶಿವಣ್ಣ, ಸಹಾಯಕ ನಿರ್ದೇಶಕರು, (ಸ್ವತಂತ್ರ ಪ್ರಭಾರ) ಅಮಾನತ್ತು (ಲೀನ್ ಸ್ಥಾನ) ಜಿಲ್ಲಾ ಕೈಗಾರಿಕಾ ಕೇಂದ್ರ, ಗುಲಬರ್ಗಾ ಇವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ/ಕ್ರಿಮಿನಲ್ ಮೊಕದ್ದಮೆ ಶಿಸ್ತು ಕ್ರಮಗಳನ್ನು ಕಾಯ್ದಿರಿಸಿ, ಇವರ ಅಮಾನತ್ತನ್ನು ದಿನಾಂಕ: 31-03-2012ರ ಆದೇಶದಲ್ಲಿ ತೆರವುಗೊಳಿಸಿ ಸದರಿ ಅಧಿಕಾರಿಯವರನ್ನು ಜಿಲ್ಲಾ ಕೈಗಾರಿಕಾ ಕೇಂದ್ರ, ಕೋಲಾರ ಇಲ್ಲಿನ ಖಾಲಿ ಇರುವ ಸಹಾಯಕ ನಿರ್ದೇಶಕರು ಹುದ್ದೆಗೆ ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಿದೆ.

ಮೇಲೆ ಓದಲಾದ (6)ರ ಪತ್ರದೊಂದಿಗೆ ಲಗತ್ತಾಗಿರುವ ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ ಇವರು **ಕರ್ನಾಟಕ ಲೋಕಾಯುಕ್ತ ಕಾಯ್ದೆ 1984 ಸೆಕ್ಷನ್ 12(4)** ಪ್ರಕಾರ ದಿನಾಂಕ: 03-12-2012ರಂದು ನೀಡಿರುವ ವರದಿ/ಶಿಫಾರಸ್ಸಿನಲ್ಲಿ, ಶ್ರೀ ಶಿವಣ್ಣ, ಸಹಾಯಕ ನಿರ್ದೇಶಕರು, (ಸ್ವತಂತ್ರ ಪ್ರಭಾರ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ, ಇವರ ವಿರುದ್ಧ ಪೊಲೀಸ್ ಇನ್ಸ್‌ಪೆಕ್ಟರ್ ಪೊಲೀಸ್ ವಿಭಾಗ ಕರ್ನಾಟಕ ಲೋಕಾಯುಕ್ತ ಮಂಡ್ಯ ಇಲ್ಲಿ ದಾಖಲಿಸಿರುವ ಮೊ.ನಂ. 05/2011ರ ಪ್ರಕರಣಕ್ಕೆ ಸಂಬಂಧಪಟ್ಟಂತೆ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14-ಎ ರಂತೆ ವಿಚಾರಣೆ ನಡೆಸಲು ಪ್ರಕರಣವನ್ನು ಈ ಪ್ರಾಧಿಕಾರಕ್ಕೆ ವಹಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಈ ಕುರಿತಂತೆ ತೆಗೆದುಕೊಂಡ ಕ್ರಮದ ಬಗ್ಗೆ ಒಂದು ತಿಂಗಳೊಳಗಾಗಿ ವರದಿಯನ್ನು ನೀಡುವಂತೆಯೂ ಸಹ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 53 ಕೈಸೇವಿ 2011, ಬೆಂಗಳೂರು, ದಿನಾಂಕ: 24ನೇ ನವೆಂಬರ್, 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಶಿವಣ್ಣ, ಸಹಾಯಕ ನಿರ್ದೇಶಕರು, (ಸ್ವತಂತ್ರ ಪ್ರಭಾರ) ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಪುರ, ಮಂಡ್ಯ, ಪ್ರಸ್ತುತ ಜಿಲ್ಲಾ ಕೈಗಾರಿಕಾ ಕೇಂದ್ರ ಕೋಲಾರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14-ಎ ರಂತೆ ವಿಚಾರಣೆ ನಡೆಸಲು ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತ-ಕರ್ನಾಟಕ, ಇವರಿಗೆ ವಹಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ರೇಣುಕಾರಾಧ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

**PR. 84**

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಶ್ರೀಮತಿ ನಿಶಾತ್ ಆಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ, ಜಿಲ್ಲಾ ಕೈಗಾರಿಕಾ ಕೇಂದ್ರ, ಬೆಂಗಳೂರು ನಗರ, ಇವರ ಅರ್ಹತಾಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ

**ಓದಲಾಗಿದೆ:** ಅಪರ ನಿರ್ದೇಶಕರು, (ಆಡಳಿತ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಆಡಳಿತ ಸಿಬ್ಬಂದಿ ಇ2/117/2012-13, ದಿನಾಂಕ: 07-11-2012

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಶ್ರೀಮತಿ ನಿಶಾತ್ ಆಯೇಷಾರವರು ಕೈಗಾರಿಕಾ ವಿಸ್ತರಣಾಧಿಕಾರಿಯಾಗಿ ನೇರ ನೇಮಕಾತಿ ಹುದ್ದೆಗೆ ಕೆ.ಪಿ.ಎಸ್.ಸಿ ಮುಖಾಂತರ ಕೈಗಾರಿಕಾ ವಿಸ್ತರಣಾಧಿಕಾರಿ, ಮುಳಬಾಗಿಲು, ಕೋಲಾರ ಜಿಲ್ಲೆಗೆ ನೇಮಕಗೊಂಡು ದಿನಾಂಕ: 15-04-1994ರ ಅಪರಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಇವರ 2 ವರ್ಷಗಳ ಅರ್ಹತಾ ಪೂರ್ವ ಅವಧಿ ದಿನಾಂಕ: 15-04-1994ರಿಂದ 14-04-1996ರವರೆಗೆ ಇರುತ್ತದೆ. ಈ 2 ವರ್ಷದ ಅವಧಿಯಲ್ಲಿ ಇಲಾಖೆ ನಿಗದಿಪಡಿಸಿದ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದಿಲ್ಲ. ಸದರಿಯವರ ಕರ್ತವ್ಯಲೋಪದ ಮೇಲೆ ಇವರನ್ನು ದಿನಾಂಕ: 26-02-1996ರಿಂದ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಕೋಲಾರರವರು ಅಮಾನತ್ತುಗೊಳಿಸಿದ್ದು, ತದನಂತರ ದಿನಾಂಕ: 25-07-1996ರಂದು ವಿಚಾರಣೆ ಬಾಕಿ ಇರಿಸಿ ಸದರಿ ನೌಕರರಿಗೆ ತಾಲ್ಲೂಕು ಪಂಚಾಯತ್, ಕೊರಟಗೆರೆಗೆ ನೇಮಕ ಮಾಡಲಾಗಿತ್ತು. ತದನಂತರ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕೋಲಾರರವರು ವಿಚಾರಣೆ ನಡೆಸಿ ಕಛೇರಿ ಆದೇಶ ದಿನಾಂಕ: 26-06-2002ರಲ್ಲಿ ಆಪಾದನೆಗಳಿಂದ ವಿಮುಕ್ತಗೊಳಿಸಿ ವಾಗ್ದಂಡನೆ ವಿಧಿಸಿರುತ್ತಾರೆ. ಸದರಿಯವರು ನಿಗಧಿಪಡಿಸಿರುವ ಕೋ-ಆಪರೇಷನ್ ಪರೀಕ್ಷೆ ಉತ್ತೀರ್ಣರಾಗದೆ ಇದ್ದುದರಿಂದ ಇವರ ಅರ್ಹತಾ ಪೂರ್ವ ಅವಧಿಯನ್ನು ಘೋಷಿಸಿರುವುದಿಲ್ಲ ಎಂದು ತಿಳಿಸಿರುತ್ತಾರೆ.

ಸದರಿ ನೌಕರರು ಕೋ-ಆಪರೇಷನ್ ಇಲಾಖೆ ನಿಗದಿಪಡಿಸಿರುವ ಪರೀಕ್ಷೆಗಳಲ್ಲಿ 2000ನೇ ಸಾಲಿನ ಅಧಿವೇಶನದಲ್ಲಿ ಉತ್ತೀರ್ಣರಾಗಿರುವ ಬಗ್ಗೆ ಪ್ರತಿಗಳನ್ನು ಸಲ್ಲಿಸಿ ಅರ್ಹತಾ ಪೂರ್ವ ಅವಧಿಯನ್ನು ಘೋಷಿಸಲು ಕೋರಿರುತ್ತಾರೆ. ಸದರಿ ಪರೀಕ್ಷೆಯ ಫಲಿತಾಂಶವು ಕರ್ನಾಟಕ ರಾಜ್ಯಪತ್ರ ದಿನಾಂಕ: 29-11-2001ರಲ್ಲಿ ಪ್ರಕಟವಾಗಿರುತ್ತದೆ. ಸದರಿ ನೌಕರರ ಕೆಲವು ಇಲಾಖಾ ವಿಚಾರಣೆಗಳಿಗೆ ಗುರಿ ಆಗಿದ್ದು, ಈಗ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ ಎಂದು ಇಲಾಖಾ ಮುಖ್ಯಸ್ಥರು ತಿಳಿಸಿರುತ್ತಾರೆ. ಹಾಗೂ ಸರ್ಕಾರಿ ಪತ್ರ ಸಂಖ್ಯೆ ವಾಕೈ 168 ಕೈಸೇವಿ 2007 ದಿನಾಂಕ: 16-07-2012ರಲ್ಲಿ ಶ್ರೀಮತಿ ನಿಶಾತ್ ಆಯೇಷಾರವರು ಕೈಗಾರಿಕಾ ವಿಸ್ತರಣಾಧಿಕಾರಿ, ಇವರು "ಸಿ" ವೃಂದದ ಅಧಿಕಾರಿಯಾಗಿರುವುದರಿಂದ, ಇವರನ್ನು ಡಿಸ್‌ಜಾರ್ಜ್ ಮಾಡುವ ಬಗ್ಗೆ ಹಾಗೂ ಖಾಯಂ ಪೂರ್ವ ಅವಧಿ ಘೋಷಿಸುವ ಬಗ್ಗೆ ಹಾಗೂ ಇವರು ಕೈಗಾರಿಕಾ ವಿಸ್ತರಣಾಧಿಕಾರಿ ಹುದ್ದೆಯನ್ನು ಹೊಂದಲು ಸೂಕ್ತರೇ ಎಂಬ ಬಗ್ಗೆ ನೇಮಕಾತಿ ಪ್ರಾಧಿಕಾರ/ಶಿಸ್ತು ಪ್ರಾಧಿಕಾರ/ಸಕ್ಷಮ ಪ್ರಾಧಿಕಾರಿಗಳಾದ ತಾವು ನಿಯಮಾನುಸಾರ ಪರಿಶೀಲಿಸಿ ಅಗತ್ಯ ಕ್ರಮ ಕೈಗೊಳ್ಳುವಂತೆ ತಿಳಿಸಿರುವ ಮೇರೆಗೆ ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶನಾಲಯದ ಕಛೇರಿ ಆದೇಶ ಸಂಖ್ಯೆ ಆಡಳಿತ/ಸಿಬ್ಬಂದಿ/ಇ2/117/2012-13, ದಿನಾಂಕ: 18-10-2012ರಲ್ಲಿ ಶ್ರೀಮತಿ ನಿಶಾತ್ ಆಯೇಷಾ, ರವರು ಕೈಗಾರಿಕಾ ವಿಸ್ತರಣಾಧಿಕಾರಿ ಇವರ ಅರ್ಹತಾ ಪೂರ್ವ ಅವಧಿಯನ್ನು ಕರ್ನಾಟಕ ಸಿವಿಲ್ ಸೇವೆಗಳ (ಪ್ರೊಬೇಷನ್) ನಿಯಮಗಳು 1977ರ ನಿಯಮ 4(1) (ii) ರನ್ವಯ ದಿನಾಂಕ: 15-4-1996 ರಿಂದ 14-04-1997ರವರೆಗೆ ಒಂದು ವರ್ಷದವರೆಗೆ ಪ್ರೊಬೇಷನರಿ ಅವಧಿಯನ್ನು ವಿಸ್ತರಿಸಿ ಆದೇಶಿಸಿರುತ್ತಾರೆ. ಇನ್ನುಳಿದ ಅವಧಿ ದಿನಾಂಕ: 15-04-1997ರಿಂದ 29-11-2001ರವರೆಗೆ (ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಕೋ-ಅಪರೇಷನ್ ಪರೀಕ್ಷೆ ಉತ್ತೀರ್ಣವಾದ ದಿನಾಂಕ) ವಿಸ್ತರಿಸಿ ಇವರ ಅರ್ಹತಾ ಪೂರ್ವ ಅವಧಿಯನ್ನು ಘೋಷಿಸಲು ಸರ್ಕಾರದ ಅನುಮತಿ ನೀಡಲು ಇಲಾಖಾ ಮುಖ್ಯಸ್ಥರು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 168 ಕೈಸೇವಿ 2007, ಬೆಂಗಳೂರು, ದಿನಾಂಕ: 27ನೇ ನವೆಂಬರ್, 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಶ್ರೀಮತಿ ನಿಶಾತ್ ಆಯೇಷಾರವರು ಕೈಗಾರಿಕಾ ವಿಸ್ತರಣಾಧಿಕಾರಿ, ಜಿಲ್ಲಾ ಕೈಗಾರಿಕಾ ಕೇಂದ್ರ, ಬೆಂಗಳೂರು ನಗರ ಜಿಲ್ಲೆ, ಇವರ ಅರ್ಹತಾಪೂರ್ವ ಅವಧಿಯನ್ನು ಕರ್ನಾಟಕ ಸಿವಿಲ್ ಸೇವೆಗಳ (ಪ್ರೊಬೇಷನ್) ನಿಯಮಗಳು 1977 ನಿಯಮ 4 (i) ರನ್ವಯ ಇವರ ಅರ್ಹತಾ ಪೂರ್ವ ಅವಧಿಯನ್ನು ದಿನಾಂಕ: 15-04-1997 ರಿಂದ 29-11-2001ರವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರೇಣುಕಾರಾಧ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

**PR. 85** ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ/ತಾಲ್ಲೂಕು ಹದ್ದಿನಗುಂಡು ಗ್ರಾಮದ ಸರ್ವೇ ನಂ. 58.ಸಿ/2, ರ 3.5 ಎಕರೆ ಜಮೀನನ್ನು ಉಪ್ಪಾರು ತಿಪ್ಪಣ್ಣ ತಂದೆ ದೊಡ್ಡ ಈರಣ್ಣರವರು, ಬಳ್ಳಾರಿ ನಗರಾಭಿವೃದ್ಧಿ ಪ್ರಾಧಿಕಾರದ ಜಮೀನನ್ನು ಅನಧಿಕೃತವಾಗಿ ಒತ್ತುವರಿ ಮಾಡಿಕೊಂಡಿರುವ ಕುರಿತು

**ಓದಲಾಗಿದೆ :**

1. ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಇವರ ಅ.ಸ. ಪತ್ರ ಸಂಖ್ಯೆ: ಅ.ಸ.ಸಂ./ಕಂ/ಭುಸು/28/1988-89, ದಿನಾಂಕ: 20-04-2012
2. ಜಿಲ್ಲಾಧಿಕಾರಿಗಳ ಬಳ್ಳಾರಿ ಇವರ ನಡವಳಿ ಸಂಖ್ಯೆ: ಕಂದಾಯ/ಬೂಸು/79-ಬಿ/128/88-89, ದಿನಾಂಕ: 11-03-1998
3. ಕಂದಾಯ ಇಲಾಖೆ (ಭೂಸು) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ/208/ಎಲ್‌ಆರ್‌ಎಂ/97, ದಿನಾಂಕ: 17-01-98 ಮತ್ತು 27-12-97
4. ಸರ್ಕಾರದ ಕಾರಣ ಕೇಳಿ ನೋಟಿಸ್ ಸಂಖ್ಯೆ: ನಅಇ 30 ಗುಅಪ್ರಾ 2012, ದಿನಾಂಕ: 03-05-2012
5. ಆಯುಕ್ತರು, ಬಳ್ಳಾರಿ ನಗರಾಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂಖ್ಯೆ: ಬ.ನ.ಅ.ಪ್ರಾ./ಸ.ವ.ಯೋ/1/2008-09/646, ದಿನಾಂಕ: 31-05-2012

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಅ.ಸ. ಪತ್ರದಲ್ಲಿ ಜಿಲ್ಲಾಧಿಕಾರಿಗಳು ಬಳ್ಳಾರಿರವರು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಹಾಗೂ ಭೂ ಸುಧಾರಣಾ ನಿಯಮ 1976 ಅಧಿನಿಯಮ 27 (ಎ)ರಂತೆ ವಸತಿ ಬಡಾವಣೆ ನಿವೇಶನ ರಚಿಸಲು ಬಳ್ಳಾರಿ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಮಂಜೂರು ಮಾಡಿದ ಬಳ್ಳಾರಿ ನಗರದ ಸರ್ವೇ ನಂ. 234/1ಬಿ, 234/ಸಿ, ಮತ್ತು ಹದ್ದಿನಗುಂಡು ಗ್ರಾಮದ ಸರ್ವೇ ನಂ. 58/ಸಿ, ಪೈಕಿ 3.5 ಎಕರೆ, ಸಂಗನಕಲ್ಲು ಗ್ರಾಮ ಸ.ನಂ. 165/ಸಿ, ಮತ್ತು 166 ಪೈಕಿ ಒಟ್ಟು 25.85 ಎಕರೆ ಜಮೀನುಗಳನ್ನು ಅಧಿಸೂಚನೆ ಸಂಖ್ಯೆ: ಕಂ/ಭೂಸು/28/79ಬಿ/89-90, ದಿನಾಂಕ: 05-09-1991ರಲ್ಲಿ ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961 ಕಲಂ 79ಬಿ ರನ್ವಯ ಯಾವುದೇ ಋಣಭಾರವಿಲ್ಲದೆ ಸರ್ಕಾರದಲ್ಲಿ ವಿಹಿತಗೊಳಿಸಲಾಗಿದೆ. ಮತ್ತು ಸದರಿ ಆದೇಶವು ದಿನಾಂಕ: 03-10-1991ರ ರಾಜ್ಯಪತ್ರದಲ್ಲಿ ಪ್ರಕಟಗೊಂಡಿದೆ. ಇದರ ವಿರುದ್ಧ ಬಳ್ಳಾರಿ ಕೋ-ಆಪರೇಟಿವ ಬಿಲ್ಡಿಂಗ್ ಸೊಸೈಟಿರವರು ಅಪೀಲು ಸಲ್ಲಿಸಿದ್ದು, ಮೇಲ್ಮನವಿ ಆದೇಶದಲ್ಲಿ ಸೊಸೈಟಿಯ ಸದಸ್ಯರಿಗೆ ಸರ್ಕಾರದಿಂದ ರಚಿತವಾದ ನಿವೇಶನಗಳನ್ನು ಕೊಡುವ ಬಗ್ಗೆ ನಿಯಮಾನುಸಾರ ಕ್ರಮ ಕೈಗೊಳ್ಳಲು ಸೂಚಿಸಲಾಗಿದೆ. ಅದರಂತೆ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ/208/ಎಲ್‌ಆರ್‌ಎಂ/97, ದಿನಾಂಕ: 27-12-1997ರಲ್ಲಿ ಕರ್ನಾಟಕ ಭೂ ಸುಧಾರಣಾ ಕಾಯ್ದೆ 77(3)ರನ್ವಯ ಸಾರ್ವಜನಿಕ ಉದ್ದೇಶಕ್ಕಾಗಿ ವಸತಿ ಬಡಾವಣೆ ರಚಿಸಲು ಜಮೀನುಗಳನ್ನು ಬಳ್ಳಾರಿ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಮಾರುಕಟ್ಟೆ ಶುಲ್ಕ ಮತ್ತು ಭೂ ಪರಿವರ್ತನ ಶುಲ್ಕ ಪಡೆಯಲು ಆದೇಶಿಸಲಾಗಿದೆ. ಪ್ರಾಧಿಕಾರವು ಸದರಿ ಜಮೀನುಗಳ ಸ್ವಾಧೀನವನ್ನು ತಹಸೀಲ್ದಾರರು ಬಳ್ಳಾರಿ, ಇವರಿಂದ ಪಡೆದಿರುತ್ತಾರೆ. ಸದರಿ ಜಮೀನನ್ನು ಕರ್ನಾಟಕ ಭೂ ಸುಧಾರಣೆ ನಿಯಮಗಳ 27 ಎ ರಂತೆ ಲೇಔಟ್ ರಚಿಸಲು ಮಂಜೂರಾತಿ ನೀಡಲಾಗಿದೆ.

ಸದರಿ ಜಮೀನನ್ನು ಉಪ್ಪಾರು ತಿಪ್ಪಣ್ಣರವರು, ಅತಿಕ್ರಮಣ ಮಾಡಿದ್ದರಿಂದ ತೆರವುಗೊಳಿಸಲಾಗಿದ್ದು, ಸದರಿರವರು ಸಿವಿಲ್ ನ್ಯಾಯಾಲಯದಲ್ಲಿ ಯತಾಸ್ಥಿತಿ ಆದೇಶ ತಂದು ವಜಾಗೊಂಡಿರುತ್ತದೆ. ಮೂಲ ಪ್ರಕರಣವು ನ್ಯಾಯಾಲಯದಲ್ಲಿ ವಿಚಾರಣೆ ನಡೆದಿರುತ್ತದೆ. ಹದ್ದಿನಗುಂಡು ಸರ್ವೇ ನಂ. 58ನ್ನು ಉಪ್ಪಾರು ಸಣ್ಣ ಈರಣ್ಣರವರು 1955ರಲ್ಲಿಯೇ ಶ್ರೀ ಶರಣಬಸಪ್ಪ ಇವರಿಗೆ ನೋಂದಾಯಿತ ದಾಖಲೆಗಳೊಂದಿಗೆ ಮಾರಾಟ ಮಾಡಿದ್ದು, ಅವರ ಮಗನಾದ ಶ್ರೀ ಎಸ್.ಬಿ. ಈರಣ್ಣರವರು ಬಳ್ಳಾರಿ ಹೌಸಿಂಗ್ ಸೊಸೈಟಿಗೆ ಮಾರಾಟ ಮಾಡಿರುತ್ತಾರೆ. ಆದ್ದರಿಂದ ಉಪ್ಪಾರು ತಿಪ್ಪಣ್ಣರವರಿಗೆ ಯಾವುದೇ ಹಕ್ಕು ಇರುವುದಿಲ್ಲ. ಆದರೆ, ಪ್ರಾಧಿಕಾರವು ಈ ಬಗ್ಗೆ ನ್ಯಾಯಾಲಯದಲ್ಲಿ ಜಮೀನಿನ ಹಕ್ಕಿನ ಬಗ್ಗೆ ದಾಖಲೆಗಳನ್ನು ಮಂಡಿಸಿ ಆದೇಶ ಪಡೆಯುವ ಬದಲು ಪ್ರಾಧಿಕಾರದ ಮಾಲೀಕನಲ್ಲದ ವ್ಯಕ್ತಿಯೊಂದಿಗೆ 40 x 60 ಅಳತೆಯ 12 ನಿವೇಶನಗಳನ್ನು ನೀಡಲು ಕಾನೂನು ಬಾಹಿರವಾಗಿ ಒಪ್ಪಂದ ಮಾಡಿಕೊಂಡಿದೆ. ಈ ಬಗ್ಗೆ ನಿರ್ಣಯ ಕೈಗೊಂಡ ಸಭೆಯ ಸಂಬಂಧಪಟ್ಟ ಅಧಿಕಾರಿ ಮತ್ತು ಸಿಬ್ಬಂದಿಗಳ ವಿರುದ್ಧ ಕ್ರಮ ಕೈಗೊಳ್ಳಬೇಕಾಗಿದೆ ಎಂದು ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಜಿಲ್ಲಾಧಿಕಾರಿಗಳ ವರದಿಯ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮಾಂಕ (3)ರಲ್ಲಿ ಬಳ್ಳಾರಿ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಕಾರಣ ಕೇಳಿ ನೋಟಿಸ್‌ನ್ನು ಸರ್ಕಾರದಿಂದ ನೀಡಲಾಗಿ ಪ್ರಾಧಿಕಾರವು ಮೇಲೆ ಓದಲಾದ ಕ್ರಮಾಂಕ (4)ರ ವರದಿಯಲ್ಲಿ, ತನ್ನ ಸ್ಪಷ್ಟೀಕರಣ ನೀಡಿ ಈ ಹಿಂದಿನ ಪ್ರಾಧಿಕಾರ ಸಭೆಯಲ್ಲಿ ತೆಗೆದುಕೊಂಡ ನಿರ್ಣಯಗಳ ಆಧಾರ, ಪ್ರಾಧಿಕಾರದ ಕಾನೂನು ಸಲಹೆಗಾರರ ಅಭಿಪ್ರಾಯ. ಮತ್ತು ಲೋಕಅದಾಲತ್‌ನಲ್ಲಿ ಶ್ರೀ ಉಪ್ಪಾರು ತಿಪ್ಪಣ್ಣ ಪ್ರಾಧಿಕಾರದ ನಡುವೆ ನಡೆದ ರಾಜಿ ಒಪ್ಪಂದ ತೀರ್ಮಾನಗಳ ಆಧಾರದ ಮೇಲೆ ಈ ಹಿಂದಿನ ಆಯುಕ್ತರು 15 ನಿವೇಶನಗಳನ್ನು ನೋಂದಾಯಿಸಿ ಕೊಟ್ಟಿರುವುದು ಸರಿಯಾದ ಕ್ರಮವಲ್ಲವೆಂದು ದಿನಾಂಕ: 28-05-2012ರಂದು ನಡೆದ ಪ್ರಾಧಿಕಾರದ ಸಭೆಯಲ್ಲಿ ತೀರ್ಮಾನಿಸಿ ನಿರ್ಣಯಿಸಿದೆ.

ಅರ್ಜಿದಾರರಾದ ಶ್ರೀ ಉಪ್ಪಾರು ತಿಪ್ಪಣ್ಣರವರು ಮಾನ್ಯ ನಗರಾಭಿವೃದ್ಧಿ ಸಚಿವರಿಗೆ ಅರ್ಜಿಯನ್ನು ಸಲ್ಲಿಸಿ ನ್ಯಾಯಾಲಯದಲ್ಲಿನ ಪ್ರಕರಣವು ತಮ್ಮ ಕಡೆ ಇತ್ಯರ್ಥವಾಗುವುದರಲ್ಲಿ ಇದ್ದ ಪ್ರಯುಕ್ತ ಪ್ರಾಧಿಕಾರದ ಅಧ್ಯಕ್ಷರು, ಮತ್ತು ಆಯುಕ್ತರು ಸುಮಾರು 15-20 ವರ್ಷಗಳಿಂದ ಯಾವುದೇ ಹೊಸ ಬಡಾವಣೆ ನಿರ್ಮಾಣವಾಗದಿರುವ ಪ್ರಯುಕ್ತ ದಿನದಿಂದ ದಿನಕ್ಕೆ ಕಾಮಗಾರಿಯ ವೆಚ್ಚವು ಅಧಿಕವಾಗುತ್ತಿರುವುದರಿಂದ ಹಾಗೂ ನಿವೇಶನಗಳ ಬೇಡಿಕೆ ಸಾರ್ವಜನಿಕರಿಂದ

ಬರುತ್ತಿರುವುದರಿಂದ ನ್ಯಾಯಾಲಯದಲ್ಲಿ ಹೂಡಿರುವ ದಾವೆಯನ್ನು ಹಿಂದಕ್ಕೆ ಪಡೆಯಲು ಮತ್ತು ಇದಕ್ಕೆ ಪ್ರತಿಯಾಗಿ 40 x 60ರ ಅಳತೆಯ 10 ನಿವೇಶನಗಳನ್ನು ನೀಡುವುದಾಗಿ ಒಪ್ಪಿಸಿ ಸಂಧಾನ ಮಾಡಿಕೊಳ್ಳಲು ಸೂಚಿಸಿದ ಮೇರೆಗೆ ತಾವು ಮೊಕದ್ದಮೆಗಳನ್ನು ಹಿಂದಕ್ಕೆ ಪಡೆದು ಸದರಿ 10 ನಿವೇಶನಗಳನ್ನು ನೋಂದಣಿ ಮಾಡಿಕೊಟ್ಟಿರುವುದಾಗಿ, 1983–84 ರಿಂದ 88–89ರವರೆಗೆ ತಮ್ಮ ಹೆಸರಿನಲ್ಲಿ ಜಮಾಬಂಧಿ ಮಾಡಿದ್ದು, 2006ರಲ್ಲಿ ತಮಗೆ ತಿಳಿಯದಂತೆ ದುರುದ್ದೇಶದಿಂದ ಹಕ್ಕು ಬದಲಾವಣೆ ಮಾಡಿಸಿಕೊಂಡಿರುತ್ತಾರೆಂದು ತಮ್ಮ ಪತ್ರದಲ್ಲಿ ತಿಳಿಸಿರುತ್ತಾರೆ.

ಈ ಬಗ್ಗೆ ಜಿಲ್ಲಾಧಿಕಾರಿಗಳ ವರದಿಯು ಸ್ಪಷ್ಟವಾಗಿರುತ್ತದೆ. ಆದ್ದರಿಂದ ಕಾನೂನಿನ ರೀತಿಯನ್ವಯ ಸದರಿ ಜಮೀನು ತಮ್ಮ ಹಕ್ಕಿನಲ್ಲಿಯೇ ಇದೆ ಎಂದು ಅರ್ಜಿದಾರರು ರುಜುವಾತು ಮಾಡುವ ಯಾವ ದಾಖಲೆಗಳನ್ನು ನೀಡಿರುವುದಿಲ್ಲ. ಆದ್ದರಿಂದ ಪ್ರಾಧಿಕಾರದ ನಿರ್ಣಯಗಳನ್ನು ಜಾರಿಗೆ ತರಲು ಮತ್ತು ಈ ಹಿಂದೆ ನಿಯಮಾವಳಿಗಳಿಗೆ ವ್ಯತಿರಿಕ್ತವಾಗಿ ನಿರ್ಣಯಗಳನ್ನು ಕೈಗೊಂಡು ಕಾನೂನು ಮತ್ತು ಸರ್ಕಾರದ ನಿಯಮಗಳಿಗೆ ವಿರುದ್ಧವಾಗಿ ಶ್ರೀ ಉಪ್ಪಾರು ತಿಪ್ಪಣ್ಣರವರಿಗೆ 40 x 60 ಅಳತೆಯ 10 ನಿವೇಶನಗಳನ್ನು ನೋಂದಾಯಿಸಿ ಕೊಟ್ಟ ಕ್ರಮವನ್ನು ಹಿಂತೆಗೆದುಕೊಳ್ಳಬೇಕಾಗಿರುತ್ತದೆ. ಪ್ರಸ್ತುತ ಪ್ರಾಧಿಕಾರವು ಈಗಾಗಲೇ ದಿನಾಂಕ: 28–05–2012ರ ಸಭೆಯಲ್ಲಿ ನಿರ್ಣಯಿಸಿದಂತೆ ಈ ಹಿಂದಿನ ಪ್ರಾಧಿಕಾರಗಳ ನಿರ್ಣಯಗಳನ್ನು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987 ಕಲಂ (67) ರನ್ವಯ ರದ್ದುಪಡಿಸಬಹುದಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 30 ಗುಅಪ್ರಾ 2012, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್, 2012**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಶ್ರೀ ಉಪ್ಪಾರು ತಿಪ್ಪಣ್ಣ ಇವರಿಗೆ ನ್ಯಾಯಬದ್ಧವಾದ ಹಕ್ಕು ಇಲ್ಲದಿರುವ ಸಂದರ್ಭದಲ್ಲೂ ನಗರಾಭಿವೃದ್ಧಿ ಪ್ರಾಧಿಕಾರದ ಜಮೀನನ್ನು ಅನಧಿಕೃತವಾಗಿ ಒತ್ತುವರಿ ಮಾಡಿಕೊಂಡ ಹಿನ್ನೆಲೆಯಲ್ಲಿ ಮತ್ತು ಪ್ರಾಧಿಕಾರದ ಸಭೆಗಳಲ್ಲಿ ತೆಗೆದುಕೊಂಡ ನಿರ್ಣಯಗಳ ಆಧಾರ. ಪ್ರಾಧಿಕಾರದ ಕಾನೂನು ಸಲಹೆಗಾರರ ಅಭಿಪ್ರಾಯ. ಮತ್ತು ಲೋಕಅದಾಲತ್‌ನಲ್ಲಿ ಶ್ರೀ ಉಪ್ಪಾರು ತಿಪ್ಪಣ್ಣ ಮತ್ತು ಪ್ರಾಧಿಕಾರದ ನಡುವೆ ರಾಜಿ ಒಪ್ಪಂದ ತೀರ್ಮಾನಗಳ ಆಧಾರದ ಮೇಲೆ ಈ ಹಿಂದಿನ ಆಯುಕ್ತರು ಸದರಿರವರಿಗೆ ನಿವೇಶನಗಳನ್ನು ನೋಂದಾಯಿಸಿ ಕೊಟ್ಟಿರುವುದು ಸರಿಯಾದ ಕ್ರಮವಲ್ಲವೆಂದು ಸರ್ಕಾರವು ನಿರ್ಧರಿಸಿ, ಕರ್ನಾಟಕ ನಗರಾಭಿವೃದ್ಧಿ ಕಾಯ್ದೆ 1987 ಕಲಂ 67ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ದಿನಾಂಕ: 08–06–2009, ವಿಷಯ ಸಂಖ್ಯೆ: 24(15), ದಿನಾಂಕ: 24–09–2009ರ ವಿಷಯ ಸಂಖ್ಯೆ: (36), ದಿನಾಂಕ: 12–01–2010, ವಿಷಯ ಸಂಖ್ಯೆ: 19(26), ದಿನಾಂಕ: 05–04–2010, ವಿಷಯ ಸಂಖ್ಯೆ: 11, ದಿನಾಂಕ: 17–09–2010, ವಿಷಯ ಸಂಖ್ಯೆ: 24, ದಿನಾಂಕ: 18–10–2010, ವಿಷಯ ಸಂಖ್ಯೆ: 5, ಹಾಗೂ ದಿನಾಂಕ: 07–03–2011, ವಿಷಯ ಸಂಖ್ಯೆ: 01,ರ ಪ್ರಾಧಿಕಾರದ ಸಭೆಯ ನಿರ್ಣಯಗಳನ್ನು ರದ್ದುಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ. ವಾಸುದೇವರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

**PR. 105**

## ಕಂದಾಯ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು ಕಸಬಾ ಹೋಬಳಿ, ಮುದಿಗೆರೆ ಕಾವಲ್ ಗ್ರಾಮದ ಸ.ನಂ. 171ರಲ್ಲಿ 1–00 ಎಕರೆ ಜಮೀನನ್ನು ಶ್ರೀ ಮುದ್ದುಕೃಷ್ಣ ಯಾಧವ ವಿದ್ಯಾವರ್ಧಕ ಸಂಘಕ್ಕೆ ಮತ್ತು ಸ.ನಂ. 171ರಲ್ಲಿ 0–32 ಗುಂಟೆ ಜಮೀನನ್ನು ಶ್ರೀ ಭಗೀರಥ ಉಪ್ಪಾರ ಸಂಘಕ್ಕೆ ಮಂಜೂರು ಮಾಡುವ ಬಗ್ಗೆ

**ಓದಲಾಗಿದೆ :**
1. ಪ್ರಾದೇಶಿಕ ಆಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ/ಸಿಆರ್ 19/2010–11, ದಿನಾಂಕ: 21–09–2012
2. ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ(ಎಂ)/ಸಿಆರ್ 2/05–06, ದಿನಾಂಕ: 02–08–2012
3. ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ ಇವರ ಆದೇಶ ಸಂಖ್ಯೆ: ಎಲ್‌ಎನ್‌ಡಿ(ಎಂ)/ಎಸ್‌ಆರ್ 55/2008–09, ದಿನಾಂಕ: 28–02–2009 ಮತ್ತು 16–07–2011
4. ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು, ತುಮಕೂರು ಇವರ ಪತ್ರ ಸಂಖ್ಯೆ: ನಗ್ರಾಯೋಸನಿ/ತುಮ/ಪು.ಯೊ.ಪು./ಶಿರಾ/385/2012–13, ದಿನಾಂಕ: 02–08–2012

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು, ಬೆಂಗಳೂರು ಇವರು ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಕಸಬಾ ಹೋಬಳಿ, ಮುದುಗೆರೆ ಕಾವಲ್ ಗ್ರಾಮದ ಸ.ನಂ. 171ರಲ್ಲಿ 1–00 ಎಕರೆ ಜಮೀನನ್ನು ಶ್ರೀ ಮುದ್ದುಕೃಷ್ಣ ಯಾಧವ ವಿದ್ಯಾವರ್ಧಕ ಸಂಘ ಮತ್ತು 0–32 ಗುಂಟೆ ಜಮೀನನ್ನು ಶ್ರೀ ಭಗೀರಥ ಉಪ್ಪಾರ ಸಂಘಕ್ಕೆ ಮಂಜೂರು ಮಾಡಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಕ್ರಮಸಂಖ್ಯೆ (2)ರ ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ ಇವರ ಪತ್ರವನ್ನು ಪರಿಶೀಲಿಸಲಾಗಿ, ಮುದುಗೆರೆ ಕಾವಲ್ ಸ.ನಂ. 171ರ ಒಟ್ಟು ವಿಸ್ತೀರ್ಣ 4–09 ಎಕರೆ ಸರ್ಕಾರಿ ಖರಾಬು ಜಮೀನಾಗಿರುತ್ತದೆ. ಸದರಿ ಜಮೀನಿನ ಪೈಕಿ ಅಧ್ಯಕ್ಷರು, ಹಾವನೂರು ವಿದ್ಯಾಸಂಸ್ಥೆಗೆ 2–00 ಎಕರೆ ಜಮೀನು ಮಂಜೂರಾಗಿ ಉಳಿಕೆ ಖರಾಬು ಜಾತಾ 2–06 ಎಕರೆ ಇದ್ದು ಕಂದಾಯ ದಾಖಲೆಗಳಂತೆ ಜಮೀನು ಸರ್ಕಾರಿ ಎಂದು ವರ್ಗೀಕರಣಗೊಂಡಿರುತ್ತದೆ.

ದಿನಾಂಕ: 28–02–2009ರಂದು ಕ್ರಮಸಂಖ್ಯೆ: (3)ರ ಆದೇಶದಲ್ಲಿ ಜಿಲ್ಲಾಧಿಕಾರಿ, ತುಮಕೂರು ಇವರು ಮುದುಗೆರೆ ಕಾವಲ್ ಗ್ರಾಮದ ಸ.ನಂ. 171ರಲ್ಲಿ 1–32 ಎಕರೆ ಜಮೀನನ್ನು ಸಾರ್ವಜನಿಕ ಉದ್ಯಾನವನ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳ ಚಟುವಟಿಕೆಗಳಿಗಾಗಿ ಕಾಯ್ದಿರಿಸಿ ಆದೇಶ ನೀಡಿರುತ್ತಾರೆ.

ನಗರ ಯೋಜನಾ ಪ್ರಾಧಿಕಾರ, ತುಮಕೂರು ಇವರು ಸ.ನಂ. 171ರ ಪ್ರದೇಶವನ್ನು ಪರಿಶೀಲಿಸಿ, ವಸತಿ ಉದ್ದೇಶಕ್ಕಾಗಿ ಕಾಯ್ದಿರಿಸಿ, ಕ್ರಮ ಸಂಖ್ಯೆ: (4)ರಂತೆ ನೀಡಿರುವ ವರದಿಯ ಆಧಾರದಲ್ಲಿ ಪುನರ್‌ಪರಿಶೀಲಿಸಿ ಜಿಲ್ಲಾಧಿಕಾರಿ, ತುಮಕೂರು ಇವರು ಕ್ರಮಸಂಖ್ಯೆ (3)ರಲ್ಲಿ

ದಿನಾಂಕ: 16–07–2011ರಂದು ಹೊರಡಿಸಿದ ಆದೇಶದಲ್ಲಿ ಸಾರ್ವಜನಿಕ ಉದ್ದೇಶಕ್ಕಾಗಿ ಕಾಯ್ದಿರಿಸಿದ, ಅಂದರೆ, ಉದ್ಯಾನವನ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಕ್ಕಾಗಿ ಕಾಯ್ದಿರಿಸಲಾಗಿದ್ದ ಆದೇಶವನ್ನು ರದ್ದುಪಡಿಸಿ, ಈ ಜಮೀನನ್ನು ಸರ್ಕಾರದ ವಶಕ್ಕೆ ಪಡೆದು ಆದೇಶ ನೀಡಿರುತ್ತಾರೆ. ಪ್ರಸ್ತುತ ಸ.ನಂ. 171ರ ಪ್ರದೇಶವು ವಸತಿ ಉದ್ದೇಶಕ್ಕಾಗಿ ಕಾಯ್ದಿರಿಸಲಾಗಿರುತ್ತದೆ. ಪ್ರಸ್ತಾಪಿತ ಜಮೀನು ಶಿರಾ ನಗರಸಭೆಯ 2 ಕಿ.ಮೀ. ವ್ಯಾಪ್ತಿಯಲ್ಲಿದೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 22 ಎಲ್‌ಜಿಡಿ 2012, ಬೆಂಗಳೂರು, ದಿನಾಂಕ: 08ನೇ ಜನವರಿ, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಕಸಬಾ ಹೋಬಳಿ, ಮುದುಗೆರೆ ಕಾವಲ್ ಗ್ರಾಮದ ಸ.ನಂ. 171ರಲ್ಲಿ 1–00 ಎಕರೆ ಜಮೀನನ್ನು ಶ್ರೀ ಮುದ್ದುಕೃಷ್ಣ ಯಾಧವ ವಿದ್ಯಾವರ್ಧಕ ಸಂಘ ಉಳಿದ ಇದೇ ಸರ್ವೆ ನಂಬರಿನ 0–32 ಗುಂಟೆ ಜಮೀನನ್ನು ಶ್ರೀ ಭಗೀರಥ ಉಪ್ಪಾರ ಸಂಘಕ್ಕೆ ವಿದ್ಯಾರ್ಥಿಗಳ ವಸತಿ ನಿಲಯ ಸ್ಥಾಪನೆಗಾಗಿ ಕರ್ನಾಟಕ ಭೂ ಕಂದಾಯ ನಿಯಮಗಳ 1966ರ ನಿಯಮ 97(4)ರಡಿ ಗಾಯರಾಣ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳ (1969) ನಿಯಮ 19 (2)(ಎ)ರನ್ವಯ ಜಮೀನಿನ ಪ್ರಚಲಿತ ಮಾರುಕಟ್ಟೆ ಬೆಲೆಯ ಶೇ. 10ರಷ್ಟು ಗುತ್ತಿಗೆ ದರ ವಿಧಿಸಿ, ಎರಡು ವರ್ಷಗಳಿಗೊಮ್ಮೆ ಶೇ. 10ರಷ್ಟು ಹೆಚ್ಚಿಸುವ ಷರತ್ತಿನೊಂದಿಗೆ 30 ವರ್ಷಗಳ ಅವಧಿಗೆ ಗುತ್ತಿಗೆ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ಜಿ. ಲಕ್ಷ್ಮೀನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3)

**PR. 106**

## ಒಳಾಡಳಿತ ಸಚಿವಾಲಯ

**ವಿಷಯ :** ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ಏಕಸದಸ್ಯ ಆಯೋಗದ ಸಿಬ್ಬಂದಿಗಳ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳನ್ನು ಹೊರಡಿಸುವ ಬಗ್ಗೆ

**ಓದಲಾಗಿದೆ :**

1. ಅಧಿಸೂಚನೆ ಸಂಖ್ಯೆ: ಹೆಚ್‌ಡಿ 4 ಪಿಸಿಇ 2012, ದಿನಾಂಕ: 09–03–2012
2. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 4 ಪಿಸಿಇ 2012 (ಭಾಗ–2), ದಿನಾಂಕ: 30–03–2012
3. ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗರವರ ಪತ್ರ ಸಂಖ್ಯೆ: ಆರ್‌ಜಿವಿಸಿ ನಂ. 131/2012, ದಿನಾಂಕ: 09–08–2012

**ಪ್ರಸ್ತಾವನೆ:**

ದಿನಾಂಕ: 02–03–2012ರಂದು ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸರ ನಡುವೆ ನಡೆದ ಘರ್ಷಣೆಯ ಕುರಿತು ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ, ನಿವೃತ್ತ ನ್ಯಾಯಾಧೀಶರು ಇವರ ನೇತೃತ್ವದಲ್ಲಿ ಏಕ ಸದಸ್ಯ ವಿಚಾರಣಾ ಆಯೋಗವನ್ನು ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ ರಚಿಸಲಾಗಿದೆ.

ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ಏಕ ಸದಸ್ಯ ವಿಚಾರಣಾ ಆಯೋಗಕ್ಕೆ ಈ ಕೆಳಕಂಡ 13 ಸಿಬ್ಬಂದಿಯನ್ನು ತಾತ್ಕಾಲಿಕವಾಗಿ ಮೇಲೆ ಓದಲಾದ ಕ್ರಮಸಂಖ್ಯೆ (2)ರ ಆದೇಶದಲ್ಲಿ ಸೃಜಿಸಿ ಆದೇಶ ಹೊರಡಿಸಿದೆ.

| | | |
|---|---|---|
| 1. | ಕಾರ್ಯದರ್ಶಿ | 1 ಹುದ್ದೆ |
| 2. | ಕೋರ್ಟ್ ಆಫೀಸರ್ | 1 ಹುದ್ದೆ |
| 3. | ಶಾಖಾಧಿಕಾರಿ | 1 ಹುದ್ದೆ |
| 4. | ಹಿರಿಯ ಜಡ್ಜ್‌ಮೆಂಟ್ ರೈಟರ್ | 1 ಹುದ್ದೆ |
| 5. | ಶೀಘ್ರಲಿಪಿಗಾರರು (ಡಿಜಿ & ಐಜಿಪಿ ಕಛೇರಿಯಿಂದ ನಿಯೋಜನೆ) | 1 ಹುದ್ದೆ |
| 6. | ಬೆರಳಚ್ಚುಗಾರ | 1 ಹುದ್ದೆ |
| 7. | ಹಿರಿಯ ಸಹಾಯಕ | 1 ಹುದ್ದೆ |
| 8. | ಪ್ರಥಮ ದರ್ಜೆ ಸಹಾಯಕ | 1 ಹುದ್ದೆ |
| 9. | ದ್ವಿತೀಯ ದರ್ಜೆ ಸಹಾಯಕ | 1 ಹುದ್ದೆ |
| 10. | ವಾಹನ ಚಾಲಕ | 1 ಹುದ್ದೆ |
| 11. | ಜಮೇದಾರ | 1 ಹುದ್ದೆ |
| 12. | ದಲಾಯತ್ (ಗ್ರೂಪ್–ಡಿ) | 2 ಹುದ್ದೆ |

ಕಾರ್ಯದರ್ಶಿ, ನ್ಯಾಯಮೂರ್ತಿ ಅರ್.ಜಿ. ವೈದ್ಯನಾಥ ಏಕ ಸದಸ್ಯ ವಿಚಾರಣಾ ಆಯೋಗ ಅವರು ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ನಿವೃತ್ತ ನೌಕರರ ಸೇವೆಯನ್ನು ಗುತ್ತಿಗೆ ಆಧಾರದ ಮೇಲೆ ಆಯೋಗದ ಕಾರ್ಯಾವಧಿಯವರೆಗೆ ಮಾತ್ರ ಪಡೆಯಲಾಗಿದೆಯೆಂದು ತಿಳಿಸಿರುತ್ತಾರೆ. ಸದರಿ ನೌಕರರ ಗುತ್ತಿಗೆ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸಬೇಕಾಗಿರುತ್ತದೆ. ಆದುದರಿಂದ ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 4 ಪಿಸಿಇ 2012 (ಭಾಗ–2), ಬೆಂಗಳೂರು, ದಿನಾಂಕ: 16ನೇ ಜನವರಿ, 2013**

ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ಏಕ ಸದಸ್ಯ ವಿಚಾರಣಾ ಆಯೋಗವು ಗುತ್ತಿಗೆ ಆಧಾರದ ಮೇಲೆ ನೇಮಿಸಿರುವ ನೌಕರರ ನೇಮಕಾತಿಯು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರುತ್ತದೆ.

1. ನೌಕರರ ಗುತ್ತಿಗೆ ನೇಮಕಾತಿ ಅವಧಿಯು ಆಯೋಗದ ಅವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ನೌಕರರ ಗುತ್ತಿಗೆ ನೇಮಕಾತಿಗೆ ಮಾಸಿಕ ನೇಮಕಾತಿ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ (ಮೂಲ ವೇತನ ಮಾತ್ರ) ಸಂಚಿತ ವೇತನವನ್ನು ನಿಗದಿಪಡಿಸಲಾಗಿದೆ. ಇದಲ್ಲದೆ, ಇನ್ನಿತರ ಯಾವುದೇ ಭತ್ಯೆಗಳಿಗೂ ಇವರು ಅರ್ಹರಾಗಿರುವುದಿಲ್ಲ.
3. ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಟ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆಯನ್ನು ಮಾತ್ರ ಪಡೆಯಲು ಅರ್ಹರಾಗಿರುತ್ತಾರೆ.
5. ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ವೈದ್ಯಕೀಯ ಕಾರಣಗಳ ಮೇರೆಗಾಗಲೀ ಅಥವಾ ಬೇರೆ ಕಾರಣಗಳಿಂದಾಗಲೀ ಅನಧಿಕೃತ ಗೈರು ಹಾಜರಿಯಾದಲ್ಲಿ ಗುತ್ತಿಗೆ ಆಧಾರದ ನೇಮಕಾತಿಯು ತಾನಾಗಿಯೇ ರದ್ದಾಗುತ್ತದೆ.
6. ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆದು, ವೈದ್ಯಕೀಯ ಕಾರಣಗಳ ಮೇರೆಗೆ ಅಥವಾ ಸಮರ್ಥನೀಯ ಕಾರಣಗಳ ಮೇರೆಗೆ ಗುತ್ತಿಗೆ ಆಧಾರದ ಅವಧಿಯಲ್ಲಿ ಮೂರು ತಿಂಗಳಿಗೆ ಮೀರದಂತೆ, ಗೈರು ಹಾಜರಾದಲ್ಲಿ ಈ ಕಾರಣದಿಂದ ಗುತ್ತಿಗೆ ನೇಮಕಾತಿ ರದ್ದಾಗುವುದಿಲ್ಲ. ಆದರೆ ಈ ಅವಧಿಯನ್ನು ಕರ್ತವ್ಯ ರಹಿತ ದಿನಗಳೆಂದು (ಡೈಸ್–ನಾನ್) ಪರಿಗಣಿಸಲಾಗುವುದು. ಮತ್ತು ಅವರು ಈ ಅವಧಿಗೆ ಯಾವುದೇ ವೇತನ ಮತ್ತು ಇತರ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ.
7. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ, ವೇತನ ಬಡ್ತಿ ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗುವುದಿಲ್ಲ.
8. ಸದರಿ ನೌಕರರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
9. ಸದರಿ ಗುತ್ತಿಗೆ ನೇಮಕಾತಿಯನ್ನು ಯಾವುದೇ ಕಾರಣಕ್ಕೂ ಖಾಯಂ ಎಂದು ಪರಿಗಣಿಸುವುದಿಲ್ಲ.
10. ಅವರ ಕರ್ತವ್ಯ, ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.
11. ಅವರು ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
12. 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
13. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
14. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಅವರು ಸರ್ಕಾರಕ್ಕೆ ತುಂಬಿಕೊಡಲು ಹೊಣೆಯಾಗಿರುತ್ತಾರೆ.
15. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರನಿಂದ ಬರೆಸಿಕೊಳ್ಳತಕ್ಕದ್ದು.

ಈ ಬಗ್ಗೆ ತಗಲುವ ವೆಚ್ಚವನ್ನು ಸರ್ಕಾರವು ವಿಚಾರಣಾ ಆಯೋಗಕ್ಕೆ ಕಾಲಕಾಲಕ್ಕೆ ಬಿಡುಗಡೆ ಮಾಡುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–1) ಸಂಖ್ಯೆ: ಸಿಆಸುಇ 417 ಸೇನಿಎ 2012, ದಿನಾಂಕ: 19–10–2012 ಮತ್ತು ಆರ್ಥಿಕ ಇಲಾಖೆ (ವೆಚ್ಚ–II) ದಿನಾಂಕ 13–12–2012ರಲ್ಲಿ ನೀಡಿರುವ ಸಹಮತಿ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಕಾಶ ವೈ.ಕೆ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

**PR. 107**

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಎಸ್.ಜಿ. ಕೋಟಿ, ನಿವೃತ್ತ ಹಿರಿಯ ಉಪನ್ಯಾಸಕರು, ಡಯಟ್, ಇಳಕಲ್, ಇವರು ಖಾಸಗಿ ಅನುದಾನಿತ ಪ್ರಾಥಮಿಕ ಶಾಲೆ, ಬಿಜಾಪುರ ಜಿಲ್ಲೆಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರ/ಆರೋಪಗಳ ಮೇಲಿನ ಶಿಸ್ತು ಕ್ರಮದಲ್ಲಿನ ಅಂತಿಮ ಆದೇಶ

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಇಡಿ 102 ಡಿಜಿಡಿ 1999 (ಭಾಗ-3), ದಿನಾಂಕ: 05-05-2004
2. ಸರ್ಕಾರದ ಆದೇಶ ಸಂಖ್ಯೆ: ಇಡಿ 102 ಡಿಜಿಡಿ 1999, ದಿನಾಂಕ: 20-01-2005
3. ಸರ್ಕಾರದ ಆದೇಶ ಸಂಖ್ಯೆ: ಇಡಿ 102 ಡಿಜಿಡಿ 1999, ದಿನಾಂಕ: 01-08-2006
4. ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಇವರ ವಿಚಾರಣಾ ವರದಿ, ದಿನಾಂಕ: 16-08-2007
5. ಶ್ರೀ ಎಸ್.ಜಿ. ಕೋಟಿ, ನಿವೃತ್ತ ಹಿರಿಯ ಉಪನ್ಯಾಸಕರು, ಡಯಟ್, ಇಳಕಲ್, ಇವರ ಮನವಿ ಪತ್ರ ದಿನಾಂಕ: 25-06-2012
6. ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಇವರ ಪತ್ರ ಸಂಖ್ಯೆ: ಜಿ12:ಖಾ.ಶಿ.ಆ.:ಶಿಸ್ತುಕ್ರಮ 36/2010-11/2280, ದಿನಾಂಕ: 03-10-2012

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆಯ ಖಾಸಗಿ ಅನುದಾನಿತ ಪ್ರಾಥಮಿಕ ಶಾಲಾ ಶಿಕ್ಷಣ ಸಂಸ್ಥೆಗಳಲ್ಲಿನ ಶಿಕ್ಷಕರ ನೇಮಕಾತಿಯಲ್ಲಿ ಅವ್ಯವಹಾರ ನಡೆದಿದೆ ಎನ್ನಲಾದ ಆರೋಪಕ್ಕೆ ಸಂಬಂಧಿಸಿದಂತೆ ಶಿಕ್ಷಣ ಇಲಾಖೆಯ 24 ಅಧಿಕಾರಿಗಳ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ:05-05-2004ರ ಆದೇಶದಲ್ಲಿ ಶ್ರೀ ವೈ.ಆರ್. ಸಾಹುಕಾರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯೆಂದು ನೇಮಿಸಲಾಗಿತ್ತು. ನಂತರ ಮೇಲೆ (2)ರಲ್ಲಿ ಓದಲಾದ ದಿನಾಂಕ: 20-01-2005ರ ಆದೇಶದಲ್ಲಿ 24 ಅಧಿಕಾರಿಗಳ ಜಂಟಿ ಇಲಾಖಾ ವಿಚಾರಣೆಯನ್ನು ಮಾರ್ಪಡಿಸಿ, 24 ಪ್ರತ್ಯೇಕ ಪ್ರಕರಣಗಳೆಂದು ಆದೇಶಿಸಿದೆ. ಶ್ರೀ ವೈ.ಆರ್. ಸಾಹುಕಾರ್‌ರವರನ್ನು ಇಲಾಖಾ ವಿಚಾರಣೆ ನಡೆಸುವ ಅಧಿಕಾರಿಗಳ ಪಟ್ಟಿಯಿಂದ ತೆಗೆದುಹಾಕಿದ ಕಾರಣದಿಂದ ಮೇಲೆ (3)ರಲ್ಲಿ ಓದಲಾದ ದಿನಾಂಕ: 01-08-2006ರ ಆದೇಶದಲ್ಲಿ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿ ಎಂದು ನೇಮಿಸಲಾಗಿತ್ತು. ಸದರಿ ಪ್ರಕರಣದಲ್ಲಿ ಶ್ರೀ ಎಸ್.ಜಿ. ಕೋಟಿ, ನಿವೃತ್ತ ಹಿರಿಯ ಉಪನ್ಯಾಸಕರು, ಡಯಟ್, ಇಳಕಲ್ಲ ಹಿಂದಿನ ಸಹಾಯಕ ಶಿಕ್ಷಣಾಧಿಕಾರಿಗಳು, ಬಿಜಾಪುರ ಜಿಲ್ಲೆಯ ಬೀಳಗಿ ತಾಲ್ಲೂಕಿನಲ್ಲಿ ಇವರು ಈ ಹಿಂದೆ 1991-92 ಮತ್ತು 1993-94ರವರೆಗೆ ಸಹಾಯಕ ಶಿಕ್ಷಣ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಸರ್ಕಾರದ ಆರ್ಥಿಕ ಮಿತವ್ಯಯದ ಸಂಬಂಧ ಆದೇಶ ಎಫ್.ಡಿ. 7 ಬಿಇಎಂ-87, ದಿನಾಂಕ: 10-10-1987 ಮತ್ತು ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತರ ಆದೇಶ ದಿನಾಂಕ: 28-11-1987ರ ಆದೇಶಗಳನ್ನು ಪಾಲಿಸದೇ ತಮ್ಮ ಅಧಿಕಾರದ ವ್ಯಾಪ್ತಿಯಲ್ಲಿ ಬರುವ 6 ಜನ ಶಿಕ್ಷಕರ ನೇಮಕಾತಿಯ ಅನುಮೋದನೆ ನೀಡಿ ದುರ್ನಡತೆ ಎಸಗಿದ ಆರೋಪ ಹೊಂದಿರುತ್ತಾರೆ ಹಾಗೂ ಇದೇ ಅವಧಿಯಲ್ಲಿ ಜಗದಾಂಬ ವಿದ್ಯಾವರ್ಧಕ ಸಂಘವು ನಡೆಸುತ್ತಿದ್ದ ಸಿಂದಗಿ ವಲಯದಲ್ಲಿನ 3 ಶಾಲೆಗಳ 09 ಶಿಕ್ಷಕರ ವಿವಿಧ ಅವಧಿ ವೇತನ ಬಾಕಿ ಮೊತ್ತವನ್ನು ಆಡಳಿತ ಮಂಡಳಿಯ ಖಾತೆಗೆ ಜಮಾ ಮಾಡುವಂತೆ ಸಲ್ಲಿಸಿದ ವೇತನ ಬಾಕಿ ಬಿಲ್ಲುಗಳ ಮೇಲು ರುಜು ಮಾಡಿ ಶಿಕ್ಷಕರಿಗೆ ನೇರವಾಗಿ ಬಟವಾಡೆ ಮಾಡಬೇಕಾಗಿದ್ದ ವೇತನ ಬಾಕಿ ಹಣ ಒಟ್ಟು ರೂ. 2,45,932/-ಗಳನ್ನು ಆಡಳಿತ ಮಂಡಳಿಯ ಖಾತೆಗೆ ಜಮಾ ಮಾಡುವಲ್ಲಿ ಮೇಲು ರುಜು ಮಾಡಿದ ಆಪಾದಿತರ ಅಧಿಕಾರಿಯ ಕಾರ್ಯನಿರ್ವಹಣೆಯು ಕ್ರಮಬದ್ಧವಾಗಿರದೆ ಶಿಕ್ಷಕರಿಗೆ ಬರಬೇಕಾದ ವೇತನ ಬಾಕಿ ಹಣವನ್ನು ಅವರಿಂದ ಕಸಿದುಕೊಂಡಂತಾಗಿ ದುರ್ನಡತೆ ಎಸಗಿದ ಆರೋಪವು ಸದರಿ ಅಧಿಕಾರಿಯ ಮೇಲೆ ಇರುತ್ತದೆ.

2) ಮೇಲೆ (4)ರಲ್ಲಿ ಓದಲಾದ ದಿನಾಂಕ: 16-08-2007ರ ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳು ತಮ್ಮ ತೀರ್ಪಿನಲ್ಲಿ ಆರೋಪಿತ ಅಧಿಕಾರಿಯ ಮೇಲೆ ಹೂಡಿರುವ ಆರೋಪಣಾ ಪಟ್ಟಿಯಲ್ಲಿ ಹೇಳಿರುವ ಆದೇಶವನ್ನು ವಿಚಾರಣಾ ಸಮಯದಲ್ಲಿ ಹಾಜರುಪಡಿಸದೇ ಇದ್ದು, ದೋಷಾರೋಪಣಾ ಪಟ್ಟಿಯಲ್ಲಿ ಹೇಳದೇ ಇರುವ ಆದೇಶವನ್ನು ಹಾಜರುಪಡಿಸಲಾಗಿದೆ. ದೋಷಾರೋಪಣಾ ಪಟ್ಟಿಯಲ್ಲಿ ಉಲ್ಲೇಖಿಸದೆ ಇರುವ ದಾಖಲೆಯನ್ನು ಸಾಕ್ಷ್ಯವಾಗಿ ಪರಿಗಣಿಸಲಾಗದು. ಈ ಕಾರಣಗಳಿಂದ ಆರೋಪಿತ ಅಧಿಕಾರಿಯ ಮೇಲೆ ಮಾಡಿರುವ ಈ 1ನೇ ಆರೋಪವನ್ನು ಮೈಂಡ್ ಅಪ್ಲೈ ಮಾಡದೇ ದಾಖಲೆಗಳನ್ನು ಸರಿಯಾಗಿ ಪರಿಗಣಿಸದೆ ಮಾಡಿರುವ ಆರೋಪವಾಗಿದ್ದು, ಈ ಆರೋಪವು ರುಜುವಾತು ಆಗಿರುವುದಿಲ್ಲ. ಮತ್ತು ರೂ. 2,45,932/-ಕ್ಕೆ ಸಂಬಂಧಿಸಿದಂತೆ ವಿವರಗಳನ್ನು ದೋಷಾರೋಪಣಾ ಪಟ್ಟಿಯಲ್ಲಿ ಕೊಟ್ಟಿರುವುದಿಲ್ಲ. ಈ ಬಗ್ಗೆ ದಸ್ತಾವೇಜುಗಳನ್ನು ಹಾಜರುಪಡಿಸಿರುವುದಿಲ್ಲ ಮತ್ತು ಮಂಡನಾಧಿಕಾರಿಗಳು 2ನೇ ಆರೋಪವನ್ನು ಹಾಜರುಪಡಿಸಲು ದಾಖಲೆಗಳು ಇರುವುದಿಲ್ಲವೆಂದು ಒಪ್ಪಿರುವುದರಿಂದ ಅಡ್ಮಿಟ್ ಮಾಡಿರುವುದರಿಂದ ಆರೋಪಿತ ಅಧಿಕಾರಿಯ ಮೇಲೆ 2ನೇ ಆರೋಪವು ರುಜುವಾತಾಗಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಆರೋಪಿತ ಅಧಿಕಾರಿಯ ಮೇಲೆ ಮಾಡಿರುವ ಒಂದನೇ ಮತ್ತು ಎರಡನೇ ಆರೋಪ ರುಜುವಾತುವಾಗಿಲ್ಲವಾದ್ದರಿಂದ ಸದರಿಯವರನ್ನು ನಿರ್ದೋಷಿಯೆಂದು ನಿರ್ಧರಿಸಿದ್ದೇನೆ ಎಂದು ಅಭಿಪ್ರಾಯ ಪಟ್ಟಿರುತ್ತಾರೆ.

3) ಮೇಲೆ (5)ರಲ್ಲಿ ಓದಲಾದ ದಿನಾಂಕ: 25-06-2012ರಂದು ಸರ್ಕಾರಕ್ಕೆ ಸಲ್ಲಿಸಿರುವ ಮನವಿಯಲ್ಲಿ ಪ್ರಕರಣದ ವಿಚಾರಣಾಧಿಕಾರಿಗಳ ವರದಿಯಲ್ಲಿ ದೋಷ ಮುಕ್ತನಾಗಿದ್ದು ಹಾಗೂ ಈ ಕುರಿತು ಬಿಜಾಪುರದಲ್ಲಿ ಗೋಲ್‌ಗುಂಬಸ್ ಪೊಲೀಸ್ ಠಾಣೆಯಲ್ಲಿ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ: 104/2004, ದಿನಾಂಕ: 05-09-2011ರಂದು 14 ಅಧಿಕಾರಿಗಳ ಮೇಲೆ ಮೊಕದ್ದಮೆ ದಾಖಲಾಗಿದ್ದು, ಅದರಲ್ಲಿ ಈ ನಂತರ ಹೆಸರು ಇರುವುದಿಲ್ಲ ಹಾಗೂ ಸಾಕ್ಷಿಪುರಾವೆಗಳು ಆಗದೇ ಇರುವುದರಿಂದ ದೋಷಾರೋಪಣೆ ಪತ್ರದಿಂದ ಕೈಬಿಡಲಾಗಿರುವ ಬಗ್ಗೆ ಎಂಬ ಪ್ರತ್ಯೇಕ ಪುರವಣಿಯಲ್ಲಿ 18 ಜನರ ಹೆಸರಿನಲ್ಲಿ ಕ್ರಮ ಸಂಖ್ಯೆ: 5ರಲ್ಲಿ ತನ್ನ ಹೆಸರು ಇರುತ್ತದೆ ಎಂದು, ಈ ಕಾರಣದಿಂದ ತಾನು ಎಲ್ಲಾ ಇಲಾಖಾ ವಿಚಾರಣೆ, ದೋಷಾರೋಪಣಾ ಪತ್ರದಿಂದ ಕೈಬಿಟ್ಟಿರುವುದರಿಂದ, ಆರೋಪ ಮುಕ್ತನಾಗಿರುವುದರಿಂದ ತಡೆಹಿಡಿಯಲಾದ ಎಲ್ಲಾ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆ ಮಾಡಬೇಕೆಂದು ವಿನಂತಿಸಿಕೊಂಡಿರುತ್ತಾರೆ.

4) ಮೇಲೆ (6)ರಲ್ಲಿ ಓದಲಾದ ದಿನಾಂಕ: 03-10-2012ರ ಪತ್ರದಲ್ಲಿ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಇವರು ಗೋಲ್‌ಗುಂಬಸ್ ಪೊಲೀಸ್ ಠಾಣೆಯಲ್ಲಿ ಶ್ರೀ ಎಸ್.ಜಿ. ಕೋಟಿ, ಇವರ ಹೆಸರನ್ನು ಎಫ್.ಐ.ಆರ್.ನಲ್ಲಿ ಸೇರಿಸಲಾಗಿತ್ತು. ಒಟ್ಟು 24 ಜನ ಆಪಾದಿತರ ಪಟ್ಟಿಯಲ್ಲಿ ಶ್ರೀ ಎಸ್.ಜಿ. ಕೋಟಿ, ಇವರ ಹೆಸರನ್ನು ದಾಖಲಿಸಲಾಗಿತ್ತು. ಪೊಲೀಸ್ ಠಾಣೆಯ ಅಧಿಕಾರಿಗಳು ವಿಚಾರಣೆ ಮಾಡಿ ನ್ಯಾಯಾಲಯಕ್ಕೆ ಅಂತಿಮವಾಗಿ ಚಾರ್ಜಶೀಟ್ ದಾಖಲಿಸುವಾಗ ಒಟ್ಟು 18 ಜನ ಆಪಾದಿತರ ಮೇಲೆ ಸಾಕ್ಷಿ ಪುರಾವೆ ಆಗದೇ ಇದ್ದದರಿಂದ ಅವರನ್ನು ದೋಷಾರೋಪಣ ಪಟ್ಟಿಯಿಂದ ಕೈಬಿಡಲಾಗಿತ್ತು. ಇದರಲ್ಲಿ ಎಸ್.ಜಿ. ಕೋಟಿ, ಇವರ ಹೆಸರನ್ನು ಸಹ ಕೈಬಿಡಲಾಗಿತ್ತು. ಈ ಬಗ್ಗೆ ಜೆ.ಎಂ.ಎಫ್.ಸಿ. ನ್ಯಾಯಾಲಯದಿಂದ ಆದೇಶವು

ಆಗಿರುತ್ತದೆ. ಪೋಲಿಸ್ ಠಾಣೆಯ ವರದಿ ಮತ್ತು ನ್ಯಾಯಾಲಯದ ಆದೇಶ ಇವುಗಳ ಪ್ರತಿಗಳನ್ನು ಲಗತ್ತಿಸುತ್ತಾ ಪೋಲಿಸ್ ಠಾಣೆಯಲ್ಲಿ ನೀಡಿರುವ ಜಾರ್ಜ್‌ಶೀಟ್ (ವಿಚಾರಣಾ) ವರದಿಯನ್ನು ಆಧರಿಸಿ ನ್ಯಾಯಾಲಯವು ಆದೇಶವನ್ನು ನೀಡಿದ್ದು, ಇದರನ್ವಯ ಎಸ್.ಜಿ. ಕೋಟಿ, ಇವರಿಗೆ ಲಭ್ಯವಾಗಬೇಕಾದ ಹಣಕಾಸಿನ ಸೌಲಭ್ಯಗಳನ್ನು ಅವರಿಗೆ ಬಿಡುಗಡೆ ಮಾಡಲು ಕ್ರಮವಹಿಸಬಹುದಾಗಿದೆ ಎಂದು ತಿಳಿಸಿರುತ್ತಾರೆ. ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 65 ಡಿಜಿಪಿ 2010, ಬೆಂಗಳೂರು, ದಿನಾಂಕ: 05ನೇ ಜನವರಿ, 2013**

5) ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ವಿಚಾರಣಾಧಿಕಾರಿಗಳ ವರದಿಯಲ್ಲಿ ವಿಚಾರಣಾಧಿಕಾರಿಗಳು "ಆರೋಪಿತ ಅಧಿಕಾರಿಯ ಮೇಲೆ ಮಾಡಿರುವ ಒಂದನೇ ಮತ್ತು ಎರಡನೇ ಆರೋಪ ರುಜುವಾತುವಾಗಿಲ್ಲವಾದ್ದರಿಂದ ಸದರಿಯವರನ್ನು ನಿರ್ದೋಷಿಯೆಂದು ಎಂದು ತೀರ್ಪಿತ್ತಿರುವ ಹಿನ್ನೆಲೆಯಲ್ಲಿ ಮತ್ತು ಗೋಲ್‌ಗುಂಬಸ್ ಪೊಲೀಸ್ ಠಾಣೆಯಲ್ಲಿ ಶ್ರೀ ಎಸ್.ಜಿ. ಕೋಟಿ, ಇವರ ಹೆಸರನ್ನು ಎಫ್.ಐ.ಆರ್.ನಲ್ಲಿ ಸೇರಿಸಲಾಗಿದ್ದು, ಪೋಲಿಸ್ ಠಾಣೆಯ ಅಧಿಕಾರಿಗಳು ವಿಚಾರಣೆ ಮಾಡಿ ನ್ಯಾಯಾಲಯಕ್ಕೆ ಅಂತಿಮವಾಗಿ ಚಾರ್ಜ್‌ಶೀಟ್ ದಾಖಲಿಸುವಾಗ ಒಟ್ಟು 18 ಜನ ಆಪಾದಿತರ ಮೇಲೆ ಸಾಕ್ಷಿ ಪುರಾವೆ ಆಗದೇ ಇದ್ದದ್ದರಿಂದ ಅವರನ್ನು ದೋಷಾರೋಪಣ ಪಟ್ಟಿಯಿಂದ ಕೈಬಿಡಲಾಗಿದ್ದು, ಇದರಲ್ಲಿ ಶ್ರೀ ಎಸ್.ಜಿ. ಕೋಟಿ, ಇವರ ಹೆಸರನ್ನು ಸಹ ಕೈಬಿಡಲಾಗಿರುವುದರಿಂದ ಶ್ರೀ ಎಸ್.ಜಿ. ಕೋಟಿ, ನಿವೃತ್ತ ಹಿರಿಯ ಉಪನ್ಯಾಸಕರು, ಡಯಟ್, ಇಳಕಲ್, ಇವರನ್ನು ದಿನಾಂಕ: 20–01–2005, ಸಂಖ್ಯೆ ಇಡಿ 102 ಡಿಜಿಡಿ 99ರ ಸರ್ಕಾರಿ ಆದೇಶದಲ್ಲಿ ನಮೂದಿಸಿರುವ ಆಪಾದನೆಗಳಿಂದ ದೋಷಮುಕ್ತರನ್ನಾಗಿಸಿ, ಆದೇಶಿಸಲಾಗಿದೆ. ಮತ್ತು ಈ ವಿಚಾರಣೆ ನಡೆಯದಿದ್ದಲ್ಲಿ, ಆರೋಪಿತ ಅಧಿಕಾರಿಯಾದ ಶ್ರೀ ಎಸ್.ಜಿ. ಕೋಟಿ, ನಿವೃತ್ತ ಹಿರಿಯ ಉಪನ್ಯಾಸಕರು, ಡಯಟ್, ಇಳಕಲ್, ಇವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಅಂತಹ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ ಎಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶ್ರೀಪಾದು ಹೆಚ್.ಎನ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಆಡಳಿತ)

**PR. 118**

## ಕೃಷಿ ಸಚಿವಾಲಯ

**ವಿಷಯ:** ತುಮಕೂರು ಜಿಲ್ಲೆಯ ಬೀಜೋತ್ಪಾದನಾ ಕೇಂದ್ರ, ಹಿರೇಹಳ್ಳಿಯ ಕೃಷಿ ಕ್ಷೇತ್ರವನ್ನು CHES-KVK ಹಿರೇಹಳ್ಳಿ ಇವರಿಗೆ ಹಸ್ತಾಂತರಿಸುವ ಬಗ್ಗೆ

**ಓದಲಾಗಿದೆ:** 5. ಭಾರತೀಯ ತೋಟಗಾರಿಕಾ ಸಂಶೋಧನಾ ಸಂಸ್ಥೆ, ಬೆಂಗಳೂರು ಇವರ ಪತ್ರ ಸಂಖ್ಯೆ: F.No. 3-114/07 Est. 16474, ದಿನಾಂಕ: 30–11–2009

6. ಕೃಷಿ ಆಯುಕ್ತರ ಪತ್ರ ಸಂಖ್ಯೆ: ಉಕೃನಿ (ಸ್ಪೇಘಾ): ತಾಂ–2/33/09–10, ದಿನಾಂಕ: 22–06–2010

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ, ನಿರ್ದೇಶಕರು, ಭಾರತೀಯ ತೋಟಗಾರಿಕಾ ಸಂಶೋಧನಾ ಸಂಸ್ಥೆ, ಹೆಸರಘಟ್ಟ, ಬೆಂಗಳೂರು (Indian Institute of Horticultural Research) ಇವರ ಅಧೀನದಲ್ಲಿರುವ ಹಿರೇಹಳ್ಳಿ ಕೇಂದ್ರಿಯ ತೋಟಗಾರಿಕಾ ಪ್ರಾಯೋಗಿಕ ಕೇಂದ್ರದ ಆವರಣದಲ್ಲಿ ತುಮಕೂರು ಜಿಲ್ಲೆಗೆ ಮಂಜೂರಾದ ಹೆಚ್ಚುವರಿ ಕೃಷಿ ವಿಜ್ಞಾನ ಕೇಂದ್ರವು ಕಾರ್ಯನಿರ್ವಹಿಸುತ್ತಿದೆ. CHES-KVK ಹಿರೇಹಳ್ಳಿಯಲ್ಲಿ ಕೃಷಿ ವಿಜ್ಞಾನ ಕೇಂದ್ರದ ಯೋಜಿತ ಕಾರ್ಯಕ್ರಮಗಳನ್ನು ಕೈಗೊಳ್ಳಲು ಜಮೀನಿನ ಲಭ್ಯತೆ ಇಲ್ಲದ ಕಾರಣ, ಈ ಕೇಂದ್ರಕ್ಕೆ ಹೊಂದಿಕೊಂಡಿರುವ ಕೃಷಿ ಇಲಾಖೆಯ ಹಿರೇಹಳ್ಳಿ ಜೀಜೋತ್ಪಾದನಾ ಕೇಂದ್ರದ 10 ಹೆಕ್ಟೇರ್ (25 ಎಕರೆ) ಜಮೀನನ್ನು CHES-KVK ಹಿರೇಹಳ್ಳಿಗೆ ಹಸ್ತಾಂತರಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಕೃಷಿ ಆಯುಕ್ತಾಲಯವು ಮೇಲೆ (2)ರಲ್ಲಿ ಓದಲಾದ ತಮ್ಮ ಪತ್ರದಲ್ಲಿನ ವರದಿಯಲ್ಲಿ ಕೃಷಿ ಸಂಶೋಧನೆಯಿಂದ ತುಮಕೂರು, ಪಾವಗಡ, ಶಿರಾ, ಮಧುಗಿರಿ ಮತ್ತು ಕೊರಟಗೆರೆ ತಾಲ್ಲೂಕುಗಳ ರೈತ ಸಮುದಾಯಕ್ಕೆ ಉಪಯೋಗವಾಗುವುದರಿಂದ ಹಾಗೂ ಈ ಪ್ರದೇಶದ ರೈತರ ಹಿತದೃಷ್ಟಿಯಿಂದ ಹಿರೇಹಳ್ಳಿ ಬೀಜೋತ್ಪಾದನಾ ಕೇಂದ್ರವನ್ನು ಕೆಲವೊಂದು ಷರತ್ತುಗಳೊಂದಿಗೆ ಹಸ್ತಾಂತರಿಸಬಹುದೆಂದು ಅಭಿಪ್ರಾಯ ನೀಡಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ/113/ಕೃಇಕ/2009, ಬೆಂಗಳೂರು, ದಿನಾಂಕ: 15ನೇ ನವೆಂಬರ್ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ತುಮಕೂರು ಜಿಲ್ಲೆಯ ಬೀಜೋತ್ಪಾದನಾ ಕೇಂದ್ರ, ಹಿರೇಹಳ್ಳಿಗೆ ಸಂಬಂಧಿಸಿದ ಕೋಳಿಹಳ್ಳಿಯ ಸರ್ವೆ ನಂ. 91/2, 92/1, 92/2, 92/3, 92/4, 93, 94, 95, 96 ಹಾಗೂ ಸಂಗಾಪುರ ಸರ್ವೇ ನಂ. 46ರಲ್ಲಿನ ಒಟ್ಟು ಭೌಗೋಳಿಕ ವಿಸ್ತೀರ್ಣ 9.96 ಹೆಕ್ಟೇರ್ ಜಮೀನನ್ನು ಭಾರತೀಯ ತೋಟಗಾರಿಕಾ ಸಂಶೋಧನಾ ಸಂಸ್ಥೆ, ಬೆಂಗಳೂರು ಇವರ ಅಧೀನದಲ್ಲಿರುವ ಕೇಂದ್ರೀಯ ತೋಟಗಾರಿಕಾ ಪ್ರಾಯೋಗಿಕ ಕೇಂದ್ರ (Central Horticultural Experiment Station( (II HR) ಹಿರೇಹಳ್ಳಿ ಇವರಿಗೆ ಈ ಕೆಳಕಂಡ ಷರತ್ತುಗಳೊಂದಿಗೆ ಹಸ್ತಾಂತರಿಸಲು ಅನುಮೋದನೆ ನೀಡಿದೆ.

**ಷರತ್ತುಗಳು:**

1. ಜಮೀನನ್ನು ಕೃಷಿ ವಿಜ್ಞಾನ ಕೇಂದ್ರದ ಯೋಜಿತ ಕಾರ್ಯಕ್ರಮಗಳನ್ನು ಮಾತ್ರ ಕೈಗೊಳ್ಳಲು ಉಪಯೋಗಿಸಿಕೊಳ್ಳುವುದು.
2. ಕೃಷಿ ಇಲಾಖೆಯ ಬೇಡಿಕೆಯಂತೆ ಕೃಷಿ ಇಲಾಖೆಗೆ ಬೇಕಾಗಿರುವ ಬೀಜೋತ್ಪಾದನಾ ಕಾರ್ಯಕ್ರಮ ಮತ್ತು ಪ್ರಾತ್ಯಕ್ಷಿತೆಯನ್ನು ಕೈಗೊಳ್ಳುವುದು.
3. ಜಮೀನಿನ ಯಾವುದೇ ಭಾಗವನ್ನು ಗುತ್ತಿಗೆ ಆಧಾರದ ಮೇಲಾಗಲಿ ಅಥವಾ ಮಾರಾಟವನ್ನು ಬೇರೊಬ್ಬರಿಗೆ ಮಾಡಬಾರದು.
4. ಜಮೀನಿನ ಒಡೆತನವು ಕೃಷಿ ಇಲಾಖೆಯ ವಶದಲ್ಲಯೇ ಇರುತ್ತದೆ.
5. ಅಭಿವೃದ್ಧಿ ಕಾರ್ಯಕ್ರಮ ಹಾಗೂ ಇತರೆ ಕಾರ್ಯಕ್ರಮಗಳಿಗೆ ಕೃಷಿ ಇಲಾಖೆಯು ಯಾವುದೇ ಅನುದಾನವನ್ನು ಬಿಡುಗಡೆ ಮಾಡುವುದಿಲ್ಲ.
6. ಒಂದು ವೇಳೆ CHES, ಹಿರೇಹಳ್ಳಿ ಇವರು ಬೀಜೋತ್ಪಾದನಾ ಜಮೀನನು ಹಿಂದಕ್ಕೆ ಕೃಷಿ ಇಲಾಖೆಗೆ ವಾಪಸ್ತು ನೀಡಬೇಕಾದ ಸನ್ನಿವೇಶ ಒದಗಿದ್ದಲ್ಲಿ ತಮ್ಮ ಅವಧಿಯಲ್ಲಿ ಕೃಷಿ ಕ್ಷೇತ್ರದಲ್ಲಿ ಅಭಿವೃದ್ಧಿಗಾಗಿ ಕೈಗೊಂಡಿರುವ ಕಾರ್ಯ ಮತ್ತು ಕಟ್ಟಡದ ಮೌಲ್ಯ, ಇತ್ಯಾದಿಗಳನ್ನು ಕೃಷಿ ಇಲಾಖೆಯು CHES, ಹಿರೇಹಳ್ಳಿ ಇವರಿಗೆ ವಾಪಸ್ಸು ನೀಡುವುದಿಲ್ಲ.
7. ಕೃಷಿ ಇಲಾಖೆಗೆ ರೈತ ಸಂಪರ್ಕ ಕೇಂದ್ರ ಮತ್ತು ಇತರೆ ಕಟ್ಟಡಗಳು ನಿರ್ಮಿಸುವ ಸಂದರ್ಭ ಬಂದಾಗ ಅಥವಾ ಅವಶ್ಯಕತೆ ಇದ್ದಲ್ಲಿ ಈಗ ನೀಡಿರುವ ಜಮೀನಿನಲ್ಲಿ ಅವಕಾಶ ಮಾಡಿಕೊಡುವುದು.
8. ಈ ಹಸ್ತಾಂತರವನ್ನು 30 (ಮೂವತ್ತು) ವರ್ಷಗಳ ಗುತ್ತಿಗೆ (ಲೀಸ್) ಆಧಾರದ ಮೇಲೆ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಆರ್. ವಿಶ್ವನಾಥಾಚಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ. (ಯೋಜನೆ)

**PR 113**

## ಕೃಷಿ ಸಚಿವಾಲಯ

**ವಿಷಯ:** ಕರ್ನಾಟಕ ಆಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್ ಲಿಮಿಟೆಡ್‌ನ (KAIC) ಸ್ಥಿರಾಸ್ತಿಗಳನ್ನು ಕೃಷಿ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಡಿಡಿಪಿಇಆರ್ 55 ಎಆರ್‌ಯು 2003, ದಿನಾಂಕ: 03–09–2033

2. ಕೃಷಿ ಆಯುಕ್ತರು ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕೆ.ಎ.ಐ.ಸಿ., ಇವರ ಪತ್ರ ಸಂಖ್ಯೆ: MD/KAIC/BM273/807/2011,, ದಿನಾಂಕ 04–10–2011

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕ ಸಾರ್ವಜನಿಕ ಉದ್ದಿಮೆಗಳ ಇಲಾಖೆಯು ಕರ್ನಾಟಕ ಆಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್ ಲಿಮಿಟೆಡ್‌ನ (KAIC) ಯ 1985–86 ಮತ್ತು 1986–87 ಎರಡು ವರ್ಷಗಳಲ್ಲಿ ಕನಿಷ್ಟ ಲಾಭ ತೋರಿಸಿರುವುದನ್ನು ಹೊರತುಪಡಿಸಿದರೆ, ಬಾಕಿ ಉಳಿದ ಎಲ್ಲಾ ವರ್ಷಗಳಲ್ಲಿಯೂ ನಷ್ಟವನ್ನೇ ಅನುಭವಿಸುತ್ತಾ ಬಂದಿರುವುದರಿಂದ ಹಾಗೂ ಕೆ.ಎ.ಐ.ಸಿ.ಯ ವೆಚ್ಚಗಳು ಆದಾಯಕ್ಕಿಂತ ಜಾಸ್ತಿಯಾಗಿರುವುದರಿಂದಲೂ ಹಾಗೂ ಇನ್ನಿತರ ಕಾರಣಗಳಿಂದ ಕರ್ನಾಟಕ ಕೃಷಿ ಕೈಗಾರಿಕೆ ನಿಗಮವನ್ನು ಕಾನೂನಿನ ಪ್ರಕ್ರಿಯೆಗಳಿಗನುಸಾರ ಮುಚ್ಚಲು ಪರವಾನಿಗೆ ನೀಡಿದೆ.

ಕರ್ನಾಟಕ ಆಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್‌ನ ವ್ಯವಸ್ಥಾಪನ ಮಂಡಳಿಯ 273ನೇ ಸಭೆಯು ದಿನಾಂಕ: 22–09–2011ರಂದು ಜರುಗಿದ್ದು, ಮಂಡಳಿಯು after detailed discussions on the subject, decided to transfer the properties of KAIC to the Department of Agriculture, at the present market value and request the Government to adjust towards loan amount repable by KAIC to Government ಎಂಬ ನಿರ್ಣಯವನ್ನು ಅಂಗೀಕರಿಸಿದೆ. ವಿಷಯದ ಬಗ್ಗೆ ಸರ್ಕಾರದೊಂದಿಗೆ ಪತ್ರ ವ್ಯವಹರಿಸಲು ವ್ಯವಸ್ಥಾಪಕ ನಿರ್ದೇಶಕರಿಗೆ ಅಧಿಕಾರ ನೀಡಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಕೃಷಿ ಆಯುಕ್ತರು ಹಾಗೂ ವ್ಯವಸ್ಥಪಕ ನಿರ್ದೇಶಕರು, ಕರ್ನಾಟಕ ಆಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್ ಲಿಮಿಟೆಡ್‌ನ (KAIC), ಇವರು ಕೆ.ಎ.ಐ.ಸಿ. ಈಗಾಗಲೇ ಮುಚ್ಚಿರುವುದರಿಂದ, ಈ ಸಂಸ್ಥೆಗೆ ಸೇರಿದ ವಿವಿಧ ಜಿಲ್ಲೆಗಳಲ್ಲಿರುವ ಸ್ಥಿರಾಸ್ತಿಗಳನ್ನು ಕೃಷಿ ಇಲಾಖೆಯು ರೈತ ಸಂಪರ್ಕ ಕೇಂದ್ರಗಳ ಕಟ್ಟಡ ನಿರ್ಮಾಣ, ಗೋದಾಮು ಹಾಗೂ ಇನ್ನಿತರ ವಿವಿಧ ಉದ್ದೇಶಗಳಿಗೆ ಉಪಯೋಗಿಸಿಕೊಳ್ಳಲು ಅನುವಾಗುವಂತೆ ಸಂಬಂಧಿಸಿದ ಜಂಟಿ ಕೃಷಿ ನಿರ್ದೇಶಕರುಗಳಿಗೆ ಈ ಸ್ಥಿರಾಸ್ತಿಗಳನ್ನು ಹಸ್ತಾಂತರಿಸುವ ಬಗ್ಗೆ ದಿನಾಂಕ: 22–09–2011ರಂದು ನಡೆದ 273ನೇ ಬೋರ್ಡ್ ಸಭೆಯಲ್ಲಿ ನಿರ್ಣಯ ತೆಗೆದುಕೊಂಡಿರುವುದರಿಂದ, ಈ ಸ್ಥಿರಾಸ್ತಿಗಳನ್ನು ಹಸ್ತಾಂತರಿಸಲು ಸರ್ಕಾರದ ಆದೇಶವನ್ನು ಹೊರಡಿಸುವ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಕರ್ನಾಟಕ ಆಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್ ಲಿಮಿಟೆಡ್‌ನ (KAIC) ನ ಆಸ್ತಿ/ಸ್ಥಿರಾಸ್ತಿಗಳನ್ನು ಸಂರಕ್ಷಣೆ ಮಾಡುವುದು ಹಾಗೂ ಅವುಗಳನ್ನು ಸುಸ್ಥಿತಿಯಲ್ಲಿಡುವುದು ಅವಶ್ಯಕವಾಗಿರುವುದರಿಂದ, ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃಇ/162/ಕೃಇಕ/2011, ಬೆಂಗಳೂರು ದಿನಾಂಕ: 31ನೇ ಆಗಸ್ಟ್, 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ಆಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್ ಲಿಮಿಟೆಡ್‌ನ ಅನುಬಂಧದಲ್ಲಿ ತಿಳಿಸಿರುವ ವಿವಿಧ ಜಿಲ್ಲೆಗಳಲ್ಲಿರುವ ಸ್ಥಿರಾಸ್ತಿಯನ್ನು ಕೃಷಿ ಇಲಾಖೆಗೆ ಹಸ್ತಾಂತರಿಸಲು ಸರ್ಕಾರದ ಮಂಜೂರಾತಿಯನ್ನು ಈ ಮೂಲಕ ನೀಡಲಾಗಿದೆ.

ಸದರಿ ಸ್ಥಿರಾಸ್ತಿಗಳಿಗೆ ಕೃಷಿ ಇಲಾಖೆಯ ಚಟುವಟಿಕೆಗಳಿಗೆ ಮಾತ್ರ ಉಪಯೋಗಿಸಿಕೊಳ್ಳತಕ್ಕದ್ದು ಹಾಗೂ ಬೇರೆಯವರಿಗೆ ಬಾಡಿಗೆ/ಲೀಸ್ ಆಧಾರದ ಮೇಲೆ ನೀಡತಕ್ಕದ್ದಲ್ಲ ಎಂಬ ಷರತ್ತಿನೊಂದಿಗೆ ಕೃಷಿ ನಿರ್ದೇಶಕರು ಮುಂದಿನ ಸೂಕ್ತ ಕ್ರಮ ತೆಗೆದುಕೊಳ್ಳಲು ಆದೇಶಿದಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಆರ್. ವಿಶ್ವನಾಥಾಚಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ. (ಯೋಜನೆ)

**ಅನುಬಂಧ**

| Sl. No. | Place | Extent of land and building | Description of the Property |
|---|---|---|---|
| 1 | Bagalkot | Land measuring 2 acres | Land bearing Re. sy. No. 5, Situated at Unit No. 1 Extn. Sector 49, South Machakandi village, Bagalkot |
| 2 | Belgaum | Land measuring 15,120 sft. With 1,840 sft. Shed constructed thereon | Land bearing Sy. Nos.168 and 169 and the building and the shed constructed thereon situated at Lakshmi Temple place, Shahapur Road, Belgaum. |
| 3 | Bellary | Land measuring 63 cents with 4,000 sq. ft. zinc sheet shed constructed thereon. | Land and building bearing Sy. No.TS 611/3, Block 5, Ward IX, situated at Milierpet, near police lane quarters, Bellary. |
| 4 | Bidar | a) Land measuring 5 acres and building constructed thereon of about 1,800 sft. (ground floor 1,700 sft. and first floor 110 sft). | Land bearing Sy. No.60 and building constructed thereon situated at Naubad, Bidar Taluk, Bidar. |
| | | b) Land measuring 1,975 sq. mts. (79x25 mtrs) | Land bearing Land bearing Sy. No.86/2B, situated at Aurad, Bidar District. |
| 5 | Bijapur | Land measuring 1 acre 39 guntas. | Land bearing Sy. No.744/A, Dvn. II, Block III, site No.11, situated at Mahalbagayath, Bijapur. |
| 6 | Dharwad | Land measuring 5 acres 5 guntas and the building of 3,470 sft. constructed thereon. | Land bearing Sy. No.80, and the building constructed thereon situated' at Gulaganjikoppa, Belgaum Road, Dharwad I Hobli, Dharwad. |
| 7 | Hassan | Land measuring 6 acres (out of 8 acres),1,080 sft. building and the shed of about 520 sft. Constructed thereon. | Land bearing Sy. No.18, new 123 measuring 6 acres, the building and the shed constructed thereon situated at B. Katihally, Arasikere Road, Hassan. (6 acres of land, building and shed out of 8 acres of land and building and 2 acres of land only to MIs KSSC Ltd., |
| 8 | Kolar | Land-rneasuring 4 acres 26 gutas, the building constructed there-on of about 3,400 sft. and the shed of 6,030 sft. | Land bearing Sy. No.128, the building-and the shed constructed thereon situated at Tekal Road, Kasaba, Kolar. |
| 9 | Kushalanagar | Land Maesuing (i) 5 ¾ guntas and (ii) 11 guntas, the building of about 18 squares and the shed of 730 sft. Constructed thereon | Land bearing (i) Sy. No. 90/2, measuring 5 ¾ guntas and (ii) Sy. No. 90/23A measuring 11 guntas, the building and the shed constructed thereon situated at IV block, TMC, Kushalanagar |
| 10 | Mangalore | Land measuring 75 cents (3,035.15 Smts.) | Land bearing Sy. No. 73-1A, Situated at Kankanady, Alpe Village, near Padil, Mangalore |
| 11 | Raichur | a) Land measuring 2,280 sq. mtrs. And the building of 2,300 sq. ft. constructed thereon | Land and the building bearing Block No. 90, Sy. No. 114, situated behind check post, Eklaspur village, Lingasugur Road, Raichur |
| | | b) Land measuring 8,094 sq. mtrs., and building of 2,670 sft. and godown/shed of 8,680 sft. constructed thereon | Land building and the shed bearing plot No. 35 to 37, in Sy. No. 270, 271, 273 & 274, situated at Industrial Area, (PFU) Raichur |

| Sl. No. | Place | Extent of land and building | Description of the Property |
|---|---|---|---|
| 12 | Shimoga | Land measuring 21,430 Sft. (20 guntas), building of 6,130 sft. and shed of 880 sft. constructed thereon | Land building and shed in Sy. Nos. 279, 298 & 299 measuing 21,430 sft. (20 guntas), building and shed constructed thereon situated at Milagatta Grama, O.T. Road, Shimoga |
| 13 | Sirsi | Land measuring 8 guntas | Land bearing Sy. No. 169+170 situated at Hubli Road, Sirsi, North Kanara |
| 14 | Tumkur | Land measuring 10 guntas | Land bearing Sy. No. 52, situated at Alasettikerepalya, Maralur Dinne, Kunigal Road, (presently Sadashivanagar), Tumkur |

**ಜೆ.ಆರ್. ವಿಶ್ವನಾಥಾಚಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ. (ಯೋಜನೆ)

**PR. 114**

## ಒಳಾಡಳಿತ ಸಚಿವಾಲಯ

**ವಿಷಯ :** ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘರ್ಷಣೆ ಕುರಿತು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದ ಮಂಡಿಸಿದ ಶ್ರೀ ಜಿ.ಕೆ. ಬೇಕಲ್ ವಕೀಲರು, (ನಿವೃತ್ತ ಉಪ ಪೊಲೀಸ್ ಆಯುಕ್ತರು) ಬೆಂಗಳೂರು ಇವರಿಗೆ ಸಂಭಾವನೆ ಮಂಜೂರು ಮಾಡುವ ಕುರಿತು

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 4 ಪಿಸಿಇ 2012, ದಿನಾಂಕ 09–03–2012
2. ದಿನಾಂಕ: 13–08–2012ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 11 ಪಿಸಿಇ 2012
3. ಶ್ರೀ ಜಿ.ಕೆ. ಬೇಕಲ್, ವಕೀಲರು, ನಿವೃತ್ತ ಉಪ ಪೊಲೀಸ್ ಆಯುಕ್ತರು, ಬೆಂಗಳೂರು ಇವರ ಮನವಿ ದಿನಾಂಕ: 04–01–2013

**ಪ್ರಸ್ತಾವನೆ:**

ದಿನಾಂಕ: 02–03–2012ರಂದು ಬೆಂಗಳೂರು ನಗರದ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘಟನೆಯ ಕುರಿತು ಕೂಲಂಕಷವಾಗಿ ತನಿಖೆ ನಡೆಸಲು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ಆಯೋಗವನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ನೇಮಿಸಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು, (ನಿವೃತ್ತ ಉಪ ಪೊಲೀಸ್ ಆಯುಕ್ತರು) ಬೆಂಗಳೂರು ಅವರನ್ನು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದಿಸಲು ಮೇಲೆ ಓದಲಾದ (2)ರ ಆದೇಶದಲ್ಲಿ ನೇಮಕ ಮಾಡಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು, ಬೆಂಗಳೂರು ಇವರು ಸರ್ಕಾರದ ಪರವಾಗಿ ದಿನಾಂಕ: 15–11–2012, 16–11–2012, 17–11–2012, 20–11–2012, 03–12–2012, 04–12–2012, 05–12–2012, 15–12–2012, 20–12–2012, 21–12–2012, 28–12–2012 ಹಾಗೂ 29–12–2012ರಂದು ವಾದಿಸಿದ ಸಲುವಾಗಿ ಸಂಭಾವನೆಯಾಗಿ ಒಟ್ಟು ₹ 1,16,000/– (ಒಂದು ಲಕ್ಷದ ಹದಿನಾರು ಸಾವಿರಗಳು ಮಾತ್ರ)ಗಳ ಮೊತ್ತವನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

### ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 11 ಪಿಸಿಇ 2012, ಬೆಂಗಳೂರು, ದಿನಾಂಕ: 21ನೇ ಜನವರಿ, 2013

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಕೆ. ಬೇಕಲ್, ವಕೀಲರು, (ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಇವರಿಗೆ ಈ ಕೆಳಕಂಡಂತೆ ಸಂಭಾವನೆಯನ್ನು ಮಂಜೂರು ಮಾಡಲಾಗಿದೆ.

| ಕ್ರ.ಸಂ. | ಸಂಭಾವನೆಯ ವಿವರ | ಮೊತ್ತ |
|---|---|---|
| 1 | Effective hearing (11 days) dated, 15-11-2012, 16-11-2012, 17-11-2012, 20-11-2012, 04-12-2012, 05-12-2012, 15-12-2012, 20-12-2012, 21-12-2012, 28-12-2012 & 29-12-2012 @ ₹ 10,000 per day | ₹ 1,10,000/- |
| 2 | Non-effective hearing one day 03-12-2012 @ ₹ 6,000 per day | ₹ 6,000/- |
| | ಒಟ್ಟು ಮೊತ್ತ (ಒಂದು ಲಕ್ಷದ ಹದಿನಾರು ಸಾವಿರಗಳು ಮಾತ್ರ) | ₹ 1,16,000/- |

3) ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2070–11–105–0–02–059 ವಿಶೇಷ ತನಿಖಾ ಆಯೋಗಗಳು" ಅಡಿಯಲ್ಲಿ ಭರಿಸತಕ್ಕದ್ದು. ಸದರಿ ಲೆಕ್ಕ ಶೀರ್ಷಿಕೆಯಡಿಯಲ್ಲಿ ಬಿಡುಗಡೆಯಾದ ಹಣವನ್ನು ಹಿಂಪಡೆದು ವಿತರಿಸಲು ಸರ್ಕಾರದ ಅಧೀನ ಕಾರ್ಯದರ್ಶಿ (ಕಾನೂನು ಮತ್ತು ಸುವ್ಯವಸ್ಥೆ), ಒಳಾಡಳಿತ ಇಲಾಖೆ ಇವರನ್ನು ಹಣ ಹಿಂಪಡೆಯುವ ಮತ್ತು ವಿತರಿಸುವ ಅಧಿಕಾರಿಯನ್ನಾಗಿ ನೇಮಿಸಲಾಗಿದೆ.

4) ಈ ಆದೇಶವನ್ನು ಆರ್ಥಿಕ ಇಲಾಖೆ ಆದೇಶ ಸಂಖ್ಯೆ: ಆಇ 3 ಟಿಎಫ್‌ಪಿ 2011, ದಿನಾಂಕ: 27–01–2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಕಾಶ ವೈ.ಕೆ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

PR. 116

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಸರ್ಕಾರದ ಇಲಾಖೆ ಮತ್ತು ಸಂಸ್ಥೆಗಳಾದ ನಿಗಮ, ಮಂಡಳಿ, ಸ್ಥಳೀಯ ಸಂಸ್ಥೆ ಇತ್ಯಾದಿಗಳು ಮೊಬೈಲ್ ಸೇವೆಗಳನ್ನು ನೀಡುವ ಸಂದರ್ಭದಲ್ಲಿ ಮೊಬೈಲ್ ಆಡಳಿತ (Mobile Governance innovative project) ಯೋಜನೆಯಡಿ ಸ್ಥಾಪಿಸಲಾದ ಏಕೀಕೃತ ಮೊಬೈಲ್ ಸೇವಾ ವೇದಿಕೆಯನ್ನು (Unified Mobile Service Delivery Platform) ಕಡ್ಡಾಯವಾಗಿ ಬಳಸುವ ಬಗ್ಗೆ

**ಓದಲಾಗಿದೆ :**
1. ದಿನಾಂಕ 17–12–2012ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 10 ಎಸಿಎ 2012
2. ಇ–ಆಡಳಿತ ಕೇಂದ್ರದ ದಿನಾಂಕ: 26–12–2012ರ ಪತ್ರ

**ಪ್ರಸ್ತಾವನೆ:**

1. ದಿನಾಂಕ: 14–12–2012ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 2 ಸಿಇಜಿ 2011 (ಭಾಗ–1)ರನ್ವಯ ಒಂದು ಬಾರಿಯ ಹೆಚ್ಚುವರಿ ಕೇಂದ್ರ ಸಹಾಯ {One Time Additional Central Assistance (OTACA)} ದಡಿ ಮೊಬೈಲ್ ಆಡಳಿತ (Mobile Governance innovative project) ಯೋಜನೆಯನ್ನು ಜಾರಿಗೊಳಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ ಮತ್ತು ಅದರ ಅನುಷ್ಠಾನಕ್ಕಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)ಯ ವ್ಯಾಪ್ತಿಯಲ್ಲಿರುವ ಇ–ಆಡಳಿತ ಕೇಂದ್ರ (Centre for e-Governance) ಕ್ಕೆ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.
2. ಮೇಲೆ (1)ರಲ್ಲಿ ಓದಲಾದ ದಿನಾಂಕ: 17–12–2012ರ ಸರ್ಕಾರಿ ಆದೇಶದನ್ವಯ ಮೇಲ್ಕಂಡ ಮೊಬೈಲ್ ಆಡಳಿತ (Mobile Governance innovative project) ಯೋಜನೆಯನ್ನು ಜಾರಿಗೊಳಿಸಲು ಏಕೀಕೃತ ಮೊಬೈಲ್ ಸೇವಾ ವೇದಿಕೆಯನ್ನು ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ ಮತ್ತು ಅದರ ಜಾರಿಗೊಳಿಸುವಿಕೆಯ ಉಸ್ತುವಾರಿ ಮಾಡಲು ಯೋಜನಾ ಉಸ್ತುವಾರಿ ಮತ್ತು ಚಾಲನಾ ಸಮಿತಿ (Project Monitoring and Steering Committee) ಯನ್ನು ರಚಿಸಲಾಗಿದೆ.
3. ಸರ್ಕಾರದ ವಿವಿಧ ಇಲಾಖೆಗಳು ಮತ್ತು ಸಂಸ್ಥೆಗಳು ಮೊಬೈಲ್ ಸೇವೆಗಳನ್ನು ನೀಡುವ ಸಂದರ್ಭದಲ್ಲಿ ಸದರಿ ಯೋಜನೆಯಡಿಯಲ್ಲಿ ಸ್ಥಾಪಿಸಲಾದ ಏಕೀಕೃತ ಮೊಬೈಲ್ ಸೇವಾ ವೇದಿಕೆಯ (Unified Mobile Service Delivery Platform) ಬಳಕೆಯನ್ನು ಕಡ್ಡಾಯಗೊಳಿಸಬೇಕೆಂದು ಮೇಲೆ (2)ರಲ್ಲಿ ಓದಲಾದ ಇ–ಆಡಳಿತ ಕೇಂದ್ರದ ದಿನಾಂಕ: 26–12–2012ರ ಪತ್ರದನ್ವಯ ಕೋರಲಾಗಿದೆ. ಈ ಕೋರಿಕೆಯನ್ನು ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

### ಸರ್ಕಾರದ ಆದೇಶ ಸಂಖ್ಯೆ:, ಸಿಆಸುಇ 10 ಎಸಿಎ 2012, ಬೆಂಗಳೂರು, ದಿನಾಂಕ: 11ನೇ ಜನವರಿ, 2013

4. ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ಇಲಾಖೆ ಮತ್ತು ಸಂಸ್ಥೆಗಳಾದ ನಿಗಮ, ಮಂಡಳಿ, ಸ್ಥಳೀಯ ಸಂಸ್ಥೆ ಇತ್ಯಾದಿಗಳು ಮೊಬೈಲ್ ಸೇವೆಗಳನ್ನು ನೀಡುವ ಸಂದರ್ಭದಲ್ಲಿ ಮೊಬೈಲ್ ಅಡಳಿತ (Mobile Governance under innovative project) ಯೋಜನೆಯಡಿಯಲ್ಲಿ ಸ್ಥಾಪಿಸಲಾದ ಏಕೀಕೃತ ಮೊಬೈಲ್ ಸೇವಾ ವೇದಿಕೆಯನ್ನು (Unified Mobile Service Delivery Platform) ಕಡ್ಡಾಯವಾಗಿ ಬಳಸತಕ್ಕದ್ದೆಂದು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್, ನಾಗರಾಜ**

ಪೀಠಾಧಿಕಾರಿ–1,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)

PR. 117

| ಕ್ರ. ಸಂ. | ಎಲ್ಎಸಿ ಸಂಖ್ಯೆ | ಮುರ್ಲಾಪೂರ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 47/2011 | 63/ಆ | 3–34 | 1249889 |
| 2 | 43/2011 | 63/ಅ | 1–11 | 413923 |
| 3 | 45/2011 | 62 | 0–10 | 81162 |
| 4 | 48/2011 | 53/ಅ1 | 3–16 | 1103798 |
| 5 | 49/2011 | 53/ಅ2 | 2–26 | 860314 |
| 6 | 50/2011 | 53/ಅ | 0–20 | 162324 |
| 7 | 51/2011 | 54 | 4–30 | 1542072 |
| | **ಒಟ್ಟು** | | | **5413482** |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 130 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ 04ನೇ ಡಿಸೆಂಬರ್ 2012.**

ಕೊಪ್ಪಳ ಜಿಲ್ಲೆ ಮತ್ತು ತಾಲ್ಲೂಕಿನ ಘಟರೆಡ್ಡಿಹಾಳ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮುರ್ಲಾಪೂರ ಗ್ರಾಮದ ಜಮೀನುಗಳಿಗೆ ಕೊಪ್ಪಳ (ಹಿರಿಯ ಶ್ರೇಣಿ) ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.54,13,482/–ಗಳನ್ನು (ಐವತ್ನಾಲ್ಕು ಲಕ್ಷದ ಹದಿಮೂರು ಸಾವಿರದ ನಾನೂರ ಎಂಭತ್ತೆರಡು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ.54,13,482/–ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ.ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**PR - 2254**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕು ನಾಗನೂರ ಗ್ರಾಮದ ಹದ್ದಿಯಲ್ಲಿ ಕೆರೆ ಕಾಲುವೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2011–12/4887, ದಿನಾಂಕ 21/09/2011.

**ಪ್ರಸ್ತಾವನೆ:**

ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕು ನಾಗನೂರ ಗ್ರಾಮದ ಹದ್ದಿಯಲ್ಲಿ ಕೆರೆ ಕಾಲುವೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ನಾಗನೂರ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ದಿನಾಂಕ 21/09/2011ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಕೋರಿದ್ದಾರೆ. ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆಯನ್ನು ದಿನಾಂಕ 03/06/1999ರಂದು ಹೊರಡಿಸಿದೆ.
- ಭೂಸ್ವಾಧೀನಾಧಿಕಾರಿಗಳು ಐತೀರ್ಪು ರಚಿಸಿದ ದಿನಾಂಕ 26/02/2001.

ಭೂಸ್ವಾಧೀನಾಧಿಕಾರಿಗಳು ರಚಿಸಿದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ರಾಮದುರ್ಗ ಸಿವಿಲ್ ನ್ಯಾಯಾಲಯ(ಹಿರಿಯ ವಿಭಾಗ)ದಲ್ಲಿ ಎಲ್.ಎ.ಸಿ. ಸಂಖ್ಯೆ:52/2007, 53/2007 ಮತ್ತು 54/2007ನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯ ದಿನಾಂಕ 29/05/2008ರಂದು ನೀಡಿರುವ ಆದೇಶದಲ್ಲಿ ಪ್ರತಿ ಎಕರೆಗೆ ರೂ.1,04,000/–ಗಳ ಬೆಲೆಯನ್ನು ನಿಗದಿಪಡಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ

ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಅಧಿಕಾರಿ–III ಇವರು ಪತ್ರ ಸಂಖ್ಯೆ:ಆರ್‌ಡಿ 628 ಎಲ್‌ಸಿಬಿ 2008, ದಿನಾಂಕ 24/02/2010ರಂದು ಅಭಿಪ್ರಾಯ ಪಟ್ಟಿದ್ದಾರೆ. ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ನಾಗನೂರ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ–ಸೆಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 52/2007 | 80 | 0–08–15 | 81592 |
| 2 | 53/2007 | 52/1ಎ | 0–04–15 | 48192 |
| 3 | 54/2007 | 61/1 | 0–19–00 | 188735 |
| | ಒಟ್ಟು | | | **318519** |

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 150 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ 11ನೇ ಡಿಸೆಂಬರ್ 2012.**

ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕು ನಾಗನೂರ ಗ್ರಾಮದ ಹದ್ದಿಯಲ್ಲಿ ಕೆರೆ ಕಾಲುವೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ನಾಗನೂರ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ರೂ.3,18,519–00ಗಳನ್ನು (ಮೂರು ಲಕ್ಷದ ಹದಿನೆಂಟು ಸಾವಿರದ ಐನೂರ ಹತ್ತೊಂಭತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ರೂ.3,18,519/–ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಪಿ.ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**PR - 2263**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ರಾಯಚೂರು ಜಿಲ್ಲೆ, ಲಿಂಗಸುಗೂರ ತಾಲ್ಲೂಕು ಬುದ್ದಿನ್ನಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2011–12/5173, ದಿನಾಂಕ 04/10/2011.

**ಪ್ರಸ್ತಾವನೆ:**

ರಾಯಚೂರು ಜಿಲ್ಲೆ, ಲಿಂಗಸುಗೂರ ತಾಲ್ಲೂಕು ಬುದ್ದಿನ್ನಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬುದ್ದಿನ್ನಿ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಕೋರಿದ್ದಾರೆ. ಹೆಚ್ಚಿನ ಪರಿಹಾರ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 06/01/2005.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 22/02/2006.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಧನ ಪಡೆದು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಲಿಂಗಸುಗೂರ ಸಿವಿಲ್ (ಹಿರಿಯ ವಿಭಾಗ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ:28/2007ನ್ನು ದಾಖಲಿಸಿದ್ದು, ನ್ಯಾಯಾಲಯವು ದಿನಾಂಕ 30/06/2010ರಂದು ನೀಡಿದ ಆದೇಶದಲ್ಲಿ ಪ್ರತಿ ಎಕರೆ ಜಮೀನಿಗೆ ರೂ.68,400/–ಗಳನ್ನು ನಿಗದಿಪಡಿಸಿ ಆದೇಶಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಇದು ಅರ್ಹ ಪ್ರಕರಣವಲ್ಲವೆಂದು ಕಂದಾಯ ಇಲಾಖೆಯ ಕಾನೂನು ಅಧಿಕಾರಿ–III ಇವರು ಪತ್ರ ಸಂಖ್ಯೆ:ಆರ್‌ಡಿ 1153 ಎಲ್‌ಸಿಜಿ 2010, ದಿನಾಂಕ 09/02/2011ರಂದು ಅಭಿಪ್ರಾಯ ಪಟ್ಟಿದ್ದಾರೆ. ನ್ಯಾಯಾಲಯವು ಹೆಚ್ಚಿನ ಪರಿಹಾರಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್.ಎ.ಸಿ. ಸಂಖ್ಯೆ | ಬುದ್ದಿನ್ನಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 28/2007 | 16/2 | 3–32 | 4,96,577–00 |
| | ಒಟ್ಟು | | | **4,96,577–00** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 172 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ 17ನೇ ಡಿಸೆಂಬರ್ 2012.**

ರಾಯಚೂರು ಜಿಲ್ಲೆ, ಲಿಂಗಸುಗೂರ ತಾಲ್ಲೂಕು ಬುದ್ದಿನ್ನಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬುದ್ದಿನ್ನಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್ 16/2ರ ಜಮೀನಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.4,96,577–00ಗಳನ್ನು (ನಾಲ್ಕು ಲಕ್ಷದ ತೊಂಭತ್ತಾರು ಸಾವಿರದ ಐನೂರ ಎಪ್ಪತ್ತೇಳು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ರೂ.4,96,577/–ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**PR - 2287**

## ಒಳಾಡಳಿತ ಸಚಿವಾಲಯ

**ವಿಷಯ:** ಭಾರತೀಯ ನಾಗರೀಕರಿಗೆ ಪೊಲೀಸ್ ಕ್ಲಿಯರೆನ್ಸ್ ಸರ್ಟಿಫಿಕೇಟ್ ನೀಡಲು ಶುಲ್ಕ ನಿಗದಿಪಡಿಸುವ ಬಗ್ಗೆ.

**ಉಲ್ಲೇಖ: 1)** ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 230 ಪಿಎಂಎಸ್ 2002, ದಿ31/03/2004

**2)** ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಬೆಂಗಳೂರು ಇವರ ಪತ್ರ ಸಂಖ್ಯೆ:ಎಸ್‌ಬಿ/ಬಿಸಿ/ಆಡಳಿತ/51/2012, ದಿನಾಂಕ:08/03/2012.

**ಪ್ರಸ್ತಾವನೆ:–**

ಉಲ್ಲೇಖ(1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿದೇಶಿಯರಿಗೆ ಪೊಲೀಸ್ ಕ್ಲಿಯರೆನ್ಸ್ ಸರ್ಟಿಫಿಕೇಟ್ ನೀಡುವ ಸಂಬಂಧ ರೂ.200/– (ರೂಪಾಯಿ ಎರಡು ನೂರು ಮಾತ್ರ) ಪ್ರತಿ ಅಭ್ಯರ್ಥಿಯಿಂದ ಪಡೆಯಲು ಪೊಲೀಸ್ ಆಯುಕ್ತರು, ಬೆಂಗಳೂರು, ಮೈಸೂರು ಮತ್ತು ಹುಬ್ಬಳ್ಳಿ–ಧಾರವಾಡ ಹಾಗೂ ಇನ್ನುಳಿದ ಜಿಲ್ಲೆಗಳ ಪೊಲೀಸ್ ಅಧೀಕ್ಷಕರುಗಳಿಗೆ ಅಧಿಕಾರ ನೀಡಲಾಗಿದೆ.

ಉಲ್ಲೇಖ(2)ರಲ್ಲಿ ಓದಲಾದ ಪತ್ರದಲ್ಲಿ ಪೊಲೀಸ್ ಆಯುಕ್ತರು, ಬೆಂಗಳೂರು ಅವರು ವಿದೇಶಿಯವರಿಗೆ ಶುಲ್ಕವನ್ನು ನಿಗದಿಪಡಿಸಿರುವ ಮಾದರಿಯಲ್ಲಿ ಭಾರತೀಯ ನಾಗರೀಕರಿಗೂ ಪೊಲೀಸ್ ಕ್ಲಿಯರೆನ್ಸ್ ಸರ್ಟಿಫಿಕೇಟ್ ಪಡೆಯಲು ರೂ.200/– (ರೂಪಾಯಿ ಎರಡು ನೂರು ಮಾತ್ರ) ನಿಗಧಿಗೊಳಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 130 ಎಸ್‌ಎಸ್‌ಟಿ 2011, ಬೆಂಗಳೂರು ದಿನಾಂಕ: 12/09/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶದ ಹಿನ್ನೆಲೆಯಲ್ಲಿ ವಿದೇಶಿಯರು ಪೊಲೀಸ್ ಕ್ಲಿಯರೆನ್ಸ್ ಸರ್ಟಿಫಿಕೆಟ್ ಪಡೆಯಲು ನಿಗದಿಪಡಿಸಿರುವ ಶುಲ್ಕದ ಮಾದರಿಯಲ್ಲೇ ಭಾರತೀಯ ನಾಗರೀಕರು ಪೊಲೀಸ್ ಕ್ಲಿಯರೆನ್ಸ್ ಸರ್ಟಿಫಿಕೇಟ್ ಪಡೆಯಲು ರೂ.200/– (ರೂಪಾಯಿ ಎರಡು ನೂರು ಮಾತ್ರ) ಪ್ರತಿ ಅಭ್ಯರ್ಥಿಯಿಂದ ಪಡೆಯಲು ಪೊಲೀಸ್ ಆಯುಕ್ತರು, ಬೆಂಗಳೂರು, ಮೈಸೂರು ಮತ್ತು ಹುಬ್ಬಳ್ಳಿ–ಧಾರವಾಡ, ಮಂಗಳೂರು ಹಾಗೂ ಇನ್ನುಳಿದ ಜಿಲ್ಲೆಗಳ ಪೊಲೀಸ್ ಅಧೀಕ್ಷಕರುಗಳಿಗೆ ಅಧಿಕಾರ ನೀಡಿ ಶುಲ್ಕವನ್ನು ನಿಗಧಿಪಡಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಎಫ್‌ಡಿ/299/ವೆಚ್ಚ–11/2012 ದಿನಾಂಕ 31/08/2012ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

**ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ**

**ಪ್ರಕಾಶ.ವೈ.ಕೆ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

**PR -2093**